ಕರ್ನಾಟಕ ಸರಕಾರ

ಕಾವ್ಯ

# ಹಂಸ ದಮಯಂತಿ

ಪು.ತಿ.ನರಸಿಂಹಾಚಾರ್





ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 10

# ಹಂಸದಮಯಂತಿ

ಪು. ತಿ. ನರಸಿಂಹಾಚಾರ್





ವಿಶ್ವ ಕನ್ನಡ ಸಮ್ಮೇಳನ
14-3 ಎ, ನೃಪತುಂಗ ರಸ್ತೆ
ಬೆಂಗಳೂರು-560 002

Vishwa Kannada Sahitya Male

HAMSA DAMAYANTHI by P. T. Narasimhachar

Published by K. Jayacharya, K.A.S., Additional Director, Directorate of Kannada & Culture (Vishwa Kannada Sammelana), 14/3 A, Nrupathunga Road, Bangalore-560 002.





1983. 5,000, Copies

ಬೆಲೆ : ಒಂದೂವರೆ ರೂಪಾಯಿಗಳು



ಅಶ್ವಥ್ ಪ್ರಿಂಟರ್ಸ್
೪೪೩, ೪೪ನೇ ಅಡ್ಡರಸ್ತೆ, ಒಂದನೇ ಮುಖ್ಯರಸ್ತೆ,
೮ನೇ ಹಂತ, ಜಯನಗರ, ಬೆಂಗಳೂರು-೫೬೦ ೦೮೨

ಆರ್. ಗುಂಡೂರಾವ್
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

ದಿನಾಂಕ: ೧೮-೯-೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆ ಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ . ಗುಂಡೂರಾವ್

ಮುಖ್ಯಮಂತ್ರಿ

## ಈ ಗೀತರೂಪಕಗಳ ಸಂಗೀತವನ್ನು ಕುರಿತು

ಕವಿ ತಾನು ನಿರ್ಮಿಸಿದ ಸಾಹಿತ್ಯಕ್ಕೆ ತನ್ನ ಮನೋಭೀಷ್ಟದ ಸಂಗೀತವನ್ನು ತಾನೇ ಅಳವಡಿಸಿ ಸಂಗೀತ ಮತ್ತು ಸಾಹಿತ್ಯಗಳಲ್ಲಿ ಒಳ್ಳೆ ಅಭಿರುಚಿಯುಳ್ಳ ಸಹೃದಯ ವೃಂದಕ್ಕೆ ಸಂತೋಷವನ್ನು ಉಂಟುಮಾಡುವ ಪ್ರಸಂಗಗಳು ತುಂಬ ವಿರಳ. ಇಂತಹ ಕವಿವೃಂದದಲ್ಲಿ ಪು.ತಿ.ನ. ಅವರ ಸ್ಥಾನ ಬಲು ದೊಡ್ಡದು.

ಸ್ವರಪ್ರಸ್ತಾರದೊಂದಿಗೆ ಪ್ರಕಟವಾಗುತ್ತಿರುವ ಶ್ರೀ ಪು. ತಿ. ನರಸಿಂಹಾಚಾರ್ಯರ ಗೀತರೂಪಕಗಳು ಕನ್ನಡ ಕುಲರಸಿಕರಿಗೆ ರಸದೌತಣ. ಅತ್ಯಂತ ಜನಪ್ರಿಯವಾಗಿರುವ ಈ ಕೃತಿಗಳ ಸಂಗೀತ ಕೌಶಲವನ್ನು ಕುರಿತು ಎರಡು ಮಾತುಗಳನ್ನು ಹೇಳುವ ಕೆಲಸ ನನ್ನ ಪಾಲಿಗೆ ಬಂದದ್ದು ನನ್ನ ಸುಯೋಗ.

ಈಗ್ಗೆ ಸುಮಾರು ೧೫ವರ್ಷಗಳ ಹಿಂದೆ ಪು.ತಿ.ನ. ಅವರ ಗೀತರೂಪಕ 'ವಸಂತ ಚಂದನ'ದ ಸೌರಭವನ್ನು ಅನುಭವಿಸಿ ಆನಂದಿಸುವ ಸಂದರ್ಭವೊಂದು ನನಗೆ ಒದಗಿ ಬಂದಿತ್ತು. ಗೀತಗಳ ಶೈಲಿ, ಧಾಟಿ, ನವೀನತೆ ಮತ್ತು ಅವರು ಬಳಸಿದ್ದ ಕೆಲವು ಹೊಸ ರಾಗಗಳು ನನ್ನ ಕುತೂಹಲವನ್ನು ಕೆರಳಿಸಿದುವು. ಕ್ರಮಬದ್ಧವಾಗಿ ಶಾಸ್ತ್ರಾಧ್ಯಯನ ಮಾಡಿ ಸಂಗೀತವನ್ನು ಅವರು ಅರಸಿ ಹೋಗದಿದ್ದರೂ ಸಂಗೀತವೇ ಪು.ತಿ.ನ ಅವರನ್ನು ಅರಸಿ ಬಂದಿದೆ ಎನ್ನಬೇಕು. ಅವರದು ಅಪೂರ್ವ ಮನೋಧರ್ಮ. ಶಾಸ್ತ್ರದ ಜಾಡಿನ ಜಾಲದಲ್ಲಿ ಸಿಕ್ಕಿಕೊಂಡು ಸಂಪ್ರದಾಯಕ್ಕೆ ಶರಣು ಬಿದ್ದಿದ್ದರೆ, ಪ್ರಾಯಶಃ ಅವರು ತಮ್ಮದೇ ಆದ ಹೊಸ ದಾರಿಯನ್ನು ಹಿಡಿದು ರಮಣೀಯವಾದ ಕಲ್ಪನಾ ವಿಹಾರಗಳನ್ನು ನಿರ್ಮಿಸಲು ಸಾಧ್ಯವಾಗುತ್ತಿತ್ತೋ ಇಲ್ಲವೋ ಹೇಳಲು ಬರುವುದಿಲ್ಲ.

ಶ್ರೀ ಪು. ತಿ. ನ. ಅವರು ರಚಿಸಿರುವ 'ಹರಿಣಾಭಿಸರಣ', 'ಹಂಸ ದಮಯಂತಿ', 'ಗೋಕುಲ ನಿರ್ಗಮನ', 'ವರ್ಷಹರ್ಷ', 'ರಾಮೋದಯ', 'ಸೀತಾ ಪರಿಣಯ', 'ದೀಪಲಕ್ಷ್ಮಿ' ಮುಂತಾದ ಗೀತರೂಪಕಗಳನ್ನು ಪರಿ

ಚಯ ಮಾಡಿಕೊಳ್ಳುವ ಕೆಲವು ಸುಸಂದರ್ಭಗಳು ಈಚೆಗೆ ನನ್ನ ಪಾಲಿಗೆ ಬಂದುವು. ಒಂದೊಂದು ರೂಪಕದಲ್ಲಿಯೂ ಒಂದೊಂದು ರಸಾನುಭವದ ವೈಶಿಷ್ಟ್ಯವಿದೆ ; ಒಂದೊಂದೂ ಸಾಹಿತ್ಯ ಮತ್ತು ಸಂಗೀತಗಳ ಮಧುರ ಸಮ್ಮಿಲನದ ರಸಬುಗ್ಗೆ. ಪು.ತಿ.ನ. ಅವರು "ಒಂದು ಹಾಡನ್ನು ಮಾಡುವ ಮೊದಲು ಸಂಗೀತದ ಮಟ್ಟನ್ನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಅನಂತರ ಅದಕ್ಕೆ ಹೊಂದುವ ಸಾಹಿತ್ಯವನ್ನು ಕಲ್ಪಿಸುತ್ತೇನೆ" ಎನ್ನುತ್ತಾರೆ. ಆದ್ದರಿಂದಲೇ ಒಂದೊಂದಕ್ಕೂ ಕೇವಲ ಸಾಹಿತ್ಯಕೃತಿಯಾಗಿ ಮಾತ್ರವಲ್ಲದೆ ಸಂಗೀತ ಕೃತಿಯಾಗಿಯೂ ಉಳಿದುಕೊಳ್ಳುವ ಸಾಮರ್ಥ್ಯವಿದೆ. ಗೀತಗಳ ಸೃಷ್ಟಿಯಲ್ಲಿ ಗಾಂಭೀರ್ಯವಿದೆ, ಬಿಗಿಯಿದೆ, ಕುಶಲತೆಯಿದೆ, ಕಲಾಪರಿಪೂರ್ಣತೆಯಿದೆ. ಇವರ ಯಾವುದೇ ಗೀತರೂಪಕವನ್ನು ತೆಗೆದುಕೊಂಡರೂ ಆರಂಭದಿಂದ ಅಂತ್ಯದವರೆಗೂ ಶ್ರೋತೃಗಳ ಮನಸ್ಸನ್ನು ಅದು ಸೆರೆಹಿಡಿದು ನಿಲ್ಲಿಸುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಗೀತಗಳಲ್ಲಿರುವ ವೈವಿಧ್ಯ. ಯಾವ ಹಾಡಿನಲ್ಲಿಯೂ ಅನುಕರಣವಿಲ್ಲ, ಒಂದೊಂದೂ ಸ್ವತಂತ್ರಕಲ್ಪನೆಯಿಂದ ಮೂರ್ತಿವೆತ್ತ ರಚನೆ. ಶಾಸ್ತ್ರೀಯ ಸಂಗೀತ ಕೃತಿರಚನೆಯ ಶೈಲಿಯ ಹಾಡುಗಳು ಕೆಲವು ; ವೃಂದಗಾನಕ್ಕೆ ಅನುಗುಣವಾದವು ಕೆಲವು ; ನೂರಕ್ಕೆ ನೂರು ಭಾಗ ನವೀನತೆಯಿಂದ ಶೋಭಿಸುವ ಸುಗಮ ಗೀತೆಗಳು ಹಲವು ; ಜಾನಪದ ಧಾಟಿಯಲ್ಲಿರುವ ಹಾಡುಗಳು ಕೆಲವು ; ಹೀಗೆ ವಿವಿಧ ರಸಪಾಕಗಳನ್ನೊಳಗೊಂಡ ಈ ಗೀತರೂಪಕಗಳು ವಿವಿಧ ಅಭಿರುಚಿಗಳುಳ್ಳ ರಸಿಕರೆಲ್ಲರಿಗೂ ಆಪ್ಯಾಯಮಾನವಾಗುತ್ತವೆ. ಖರಹರಪ್ರಿಯ ರಾಗದ 'ಸಖಿಹರೇ', ಕನ್ನಡ ರಾಗದ 'ಹಿಡಿದು ತರುವೆ ಜಿಂಕೆಯನು', ರಂಜನಿ ರಾಗದ 'ಕೊಳಲನೂದು ಗೋವಿಂದ', ನಾಟಕುರಂಜಿ ರಾಗದ 'ಆಡು ಬಾ' ಯದುಕುಲ ಕಾಂಭೋಜಿ ರಾಗದ 'ಮಿಥಿಲೇ ನೀ ಪುಣ್ಯನಗರಿ', ಸುರಟಿ ರಾಗದ 'ಆರರಿವರಾಪರಿಯು', ತೋಡಿ ರಾಗದ 'ಶಾರದೀ ಶೋಭಾ', ಬೇಗಡೆ ರಾಗದ 'ಗಿರಿಧರಕಾಳಮೇಘ' ಮುಂತಾದ ಕೃತಿಗಳು ಶಾಸ್ತ್ರಕ್ಕೇ ಪೂಜೆ ಮರ್ಯಾದೆ ಸಲ್ಲಬೇಕೆಂಬ ವಿದ್ವಾಂಸರ ಪಿಪರ್ಶೆಯ ದೃಷ್ಟಿಯಲ್ಲೂ ದರ್ಪದಿಂದ ತಲೆಯೆತ್ತಿ ನಿಲ್ಲಬಲ್ಲವು. ಪ್ರಸಿದ್ಧರಾದ ವಾಗ್ಗೇಯಕಾರರು ಹಿಂಡಿ ಹೀರಿರುವ ಈ ರಾಗಗಳಲ್ಲಿ ಚರ್ವಿತ ಚರ್ವಣವಲ್ಲದ ಕೃತಿಗಳನ್ನು ರಚಿಸಿರುವುದು ಪು.ತಿ ನ. ಅವರ ಕಲ್ಪನಾ ಸಾಮ

ರ್ಥ್ಯಕ್ಕೆ ಸಾಕ್ಷಿ ನುಡಿಯುತ್ತದೆ. ಸ್ವತಂತ್ರವಾದ ಇವರ ಕಲ್ಪನಾ ಪ್ರವಾಹದಲ್ಲಿ ಅನೇಕ ನೂತನ ರಾಗಗಳು ಮೈತಾಳಿ ಬಂದಿವೆ. ವಾಸಂತಿ, ಸಂಜೀವಿನಿ, ಹರಿಣಿ, ಋತುವಿಲಾಸ, ಗಾಂಧಾರದೋಲ, ಋಷಭವಿಲಾಸ ಮತ್ತು ಇನ್ನೂ ನಾಮಕರಣವಾಗಿಲ್ಲದೇ ಇರುವ ಅನೇಕ ಸುಂದರವಾದ ರಾಗಗಳು ಸಂಗೀತಕ್ಕೆ ಪು.ತಿ.ನ. ಅವರು ನೀಡಿರುವ ಕೊಡುಗೆ. ಹಿಂದೂಸ್ತಾನಿ ರಾಗಗಳನ್ನೂ ಅನೇಕವಾಗಿ ಬಳಸಿದ್ದಾರೆ. ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮ ವನ್ನುಂಟುಮಾಡಬಲ್ಲ ಲಘುಗೀತಗಳನ್ನು ಸೃಷ್ಟಿಸುವುದರಲ್ಲಿ ಎತ್ತಿದಕೈ ಪು.ತಿ ನ. ಅವರದು. ವರ್ಣ ಮಟ್ಟು ಎಷ್ಟೇ ಲಘುವಾಗಿದ್ದರೂ ರಸಾನುಭವ ದಲ್ಲಿ ಅಗ್ಗವಿಲ್ಲ, ಅನುಕರಣವಿಲ್ಲ. ಇಂಥ ಹಾಡುಗಳಲ್ಲಿ 'ಘನವಿಪಿನ', 'ನೀರ ಜಾಕ್ಷಿ ನೀ ಬಳಿಯಿರೆ', 'ಬಾನಬಣ್ಣವ ಮಾಗಿಸಿ', 'ಶರರುಹರಾಗಂ', 'ಬಾನಿ ದಾಗೆ ಕರಿದು ತಿರಿಯೋ', 'ತೂಗಿರಿ ರಘುರಾಮನ,' 'ಭಾಮಾರಮಣನ', 'ಬೆಳಗೆ ನಮ್ಮೀ ದೀವಿಗೆ,' ಇವು ಕೆಲವು. 'ಮೋಲಿನ ಮೇಲೆ ತೇಲುವಿಂಥಾ ಕಾಲಬಾರದೆ' ಎಂಬಂಥ ಜಾನಪದ ಧಾಟಿಯ ಹಾಡುಗಳು ಎಂಥ ಅರಸಿಕನನ್ನೂ ಬೆರಗುಗೊಳಿಸುತ್ತವೆ.

ಪೂರ್ವಕಾಲದಿಂದ ಬಂದ ಕನ್ನಡ ಗೀತರೂಪಕಗಳೇನೋ ನಮ್ಮಲ್ಲಿ ಕೆಲವಿವೆ. ಆದರೆ ಅವುಗಳ ಮೂಲ ಸಂಗೀತ ರಚನೆ ಹೀಗೆ ಇತ್ತೆಂದು ಯಾರೂ ನಿರ್ದಿಷ್ಟವಾಗಿ ಹೇಳುವಂತಿಲ್ಲ. ಸ್ವರಸಹಿತವಾದ ಕನ್ನಡ ಗೀತರೂಪಕಗಳ ಪ್ರಕಟಣೆಗೆ ಇದೇ ಮೊದಲೆಂದು ಕಾಣುತ್ತದೆ. ಪು.ತಿ.ನ. ಅವರ ನೇತೃತ್ವ ದಲ್ಲೇ ಈ ಗೀತರೂಪಕಗಳು ಪ್ರಕಟಿತವಾಗುತ್ತಿರುವುದು ಇನ್ನೂ ವಿಶೇಷ. ಸಂಗೀತ ಸಾಹಿತ್ಯಾಭಿಮಾನಿಗಳೂ ರಸಿಕರೂ ಈ ರಸವಾಹಿನಿಯಲ್ಲಿ ಮಿಂದು ಆನಂದಿಸುತ್ತಾರೆಂಬುದರಲ್ಲಿ ಸಂದೇಹವಿಲ್ಲ.

ಸ್ವರಸಹಿತವಾದ ಗೀತರೂಪಕಗಳನ್ನು ಅಚ್ಚುಪಡಿಸುವುದು ಶ್ರಮಸಾಧ್ಯ ವಾದ ಕೆಲಸ. ಇದನ್ನು ಕನ್ನಡ ಕಾವ್ಯಮಾಲೆಯ ಸಂಪಾದಕರೂ ಪ್ರಕಟನ ಕಾರರೂ ಆದ ಶ್ರೀ ಶಂಕರನಾರಾಯಣರಾಯರು ತುಂಬ ತೃಪ್ತಿಕರವಾಗಿ ನಿರ್ವಹಿಸಿರುವುದು ಸ್ತುತ್ಯರ್ಹ.

ವಿ. ದೊರೆಸ್ವಾಮಿ ಅಯ್ಯಂಗಾರ್

## ಸ್ಥಾನಗಳು

ನಳನ ಉದ್ಯಾನವನ

ದಮಯಂತಿಯ ಉದ್ಯಾನವನ

## ಪಾತ್ರಗಳು

ಹಂಸಗಳು

ಹಂಸ

ನಳ

ವಿದೂಷಕ

ದಮಯಂತಿ

ದಮಯಂತಿಯ ಸಖಿಯರು

# ಹಂಸದಮಯಂತಿ

(ನಾಂದಿಯಾದ ಮೇಲೆ)

## ಸೂತ್ರಧಾರ

(ರಾಗ–ಆನಂದ ಭೈರವಿ)

(ವೃತ್ತ) ನೀಲಾಕಾಶಕ್ರಮಣಚತುರಂ ಹೈಮಕಾಸಾರಗೇಹಂ
ಹಂಸಂ ಮರ್ತ್ಯಪ್ರಣಯವಹನಕ್ಕಾದುದೆಂಬೀ ವಿಚಿತ್ರಂ
ನೈಜಂ ನೈಜಂ ಪ್ರಮುದಫಲದಂ ಸರ್ವಕಾಲಕ್ಕಮೆನ್ನಲ್
ಗೇಯಂ ಕಾವ್ಯಂ ರಸಿಕರೊಲವಂ ಕೊಳ್ಗೆ ಭೈಮೀಮರಾಳಂ.

ಸಮಸ್ತಕ್ಲೇಶಗಳನ್ನೂ ಕಳೆದು ಮನಸ್ಸನ್ನು ಉಲ್ಲಾಸಗೊಳಿಸುವುದಕ್ಕಾಗಿಯೇ ಏರ್ಪಟ್ಟಿರುವ ರಸಶಾಸ್ತ್ರದ ಪ್ರವರ್ತಕನಾದ ಕತೆಗಾರನ ಕೌಶಲವನ್ನು ಎಷ್ಟೊಂದು ಕೊಂಡಾಡೋಣ. ಆ ನಳನೆಲ್ಲಿ, ದಮಯಂತಿಯೆಲ್ಲಿ. ಹಂಸವೆತ್ತಣದು, ನಾವೆತ್ತಣವರು ? ನಮ್ಮೆಲ್ಲರನ್ನೂ ಹರ್ಷದಲ್ಲಿ ಸಂಬಂಧಿಸಿರುವ ಕತೆಗಾರನ ಮೋಡಿ ತಾನೆ ಎಂಥದು !

(ಹಾಡು–೧)

ವ್ಯಥೆಗಳ ಕಳೆಯುವ ಕತೆಗಾರ
ನಿನ್ನ ಕಲೆಗೆ ಯಾವುದು ಭಾರ
ಯಾವುದು ವಿಸ್ತರ ಯಾವುದು ದುಸ್ತರ
ನಿನಗೆಲೆ ಹರ್ಷದ ಹರಿಕಾರ ?

॥ ವ್ಯಥೆಗಳ —

ಕಪಿ ಹಾರಿತು ಹೆಗ್ಗಡಲನು ಎಂಬೆ
ಕಡಲನೆ ಕಡೆದರು ಬೆಟ್ಟದೊಳೆಂಬೆ
ನಿನ್ನೂಹೆಯು ಹೇರಾಳವ ತುಂಬೆ
ಸೃಷ್ಟಿಕರ್ತನಿಗು ಅರಿದೆಂಬೆ.

॥ ವ್ಯಥೆಗಳ—

ಒಲುಮೆಬೇಹಿಗಾ ಮೇಘಮರಾಳ
ಮುನಿಯು ತೋಹಿಗಮರಾಂಗನೆ ಮೇಳ
ಸುರರೆಡೆಯೊಳೆ ಕಲಿಪುರುಷ ಕರಾಳ
ಅರಿವರಾರು ನಿನ್ನೈಂದ್ರಜಾಲ ?

॥ ವ್ಯಥೆಗಳ—

ಮಾತೊಳೆ ವಿಶ್ವವ ತೋಲಿಸುವ
ಮನದೊಳಿದೆಲ್ಲವ ಜಾಲಿಸುವ
ಮುದದೊಳಗೆಲ್ಲರ ಕೀಲಿಸುವ
ನಿನ್ನನದಾರಿಗೆ ಹೋಲಿಸುವ ?

॥ ವ್ಯಥೆಗಳ—

ಅಥವಾ ಅವರವರ ಭವಪರಿಸರದಿಂದ ಅವರವರನ್ನು ಬಿಡಿಸಿ ಮುಕ್ತಿಯ ಆನಂದವನ್ನು ಎಲ್ಲರೂ ಕ್ಷಣಕಾಲದವರೆಗಾದರೂ ಸವಿಯುವಂತೆ ಕರುಣಿಸುವ ಭೂಮಪ್ರೇಮದ ಒಂದು ಸೆರಗೇನು ಈ ಕಲೆ ? ಹಾಗಲ್ಲದಿನ್ನೇನು :

(ರಾಗ–ಮೋಹನ)

(ವೃತ್ತ) ಕರಣದೊಳು ಸವಿಯ ಬಲೆ ಮತಿಯೊಳಗು ಮತದ ಸೆಲೆ
ಬಿಡುವು ಬಿಡುವೋ ಬಿಡುವು ಹೃದಯದೊಳಗೆ
ಸವಿ ಸ್ವಾಸ್ಥ್ಯ ಸೊಗಗಳೊಳು ಕಾತರಿಸುತಿದೆ ಜೀವ
ಬಿಡುಗಡೆಯ ಬಳಿತೋರುವೊಲುಮೆ ಕಳೆಗೆ.

ವೈರಾಗ್ಯೋಪಹತರಾಗಿ ಭಕ್ತಿಯ ಮರ್ಮವನ್ನರಿಯದೆ ಅಸ್ವಸ್ಥ ರಾಗಿರುವ ಮುಮುಕ್ಷುಗಳಂತೆ, ಪುರುಷಸಿಂಹ ನಳನು ಯೌವನದ ಪೂರ್ವಾವಸ್ಥೆ ಯಲ್ಲೂ ಕೂಡ ಅಸ್ಪಷ್ಟವಾದ ರೀತಿಯಲ್ಲಿ ಯಾವುದೋ ಒಲುಮೆಗೆ ಕಾತರ ನಾಗಿರುವಂತಿದೆಯಲ್ಲ. (ವಾದ್ಯದಲ್ಲಿ ಹಂಸಧ್ವನಿ) ಇಗೋ ಹಂಸಧ್ವನಿ !

(ವೃತ್ತ) ನಳನಿಗಾ ಬಳಿತೋರಿದಂಚೆಯಹಾಲಿಸೆ ಕಿವಿಯ
ತುದಿಗಾಲಿನೊಳು ನಿಲಿಸುತಿರುವ ಕವಿಯ
ಬೆಂಬಳಿಗೆ ವಾಣಿಯಿರೆ, ವೀಣೆಕೊಳಲಿಂಗೊರಳ
ಮೇಳವನುವಾದುದಿಗೊ ತಳೆಯೆ ನುಡಿಯ.

(ಹೊರಡುವನು)

## ದೃಶ್ಯ ೧

(ಆಕಾಶದಲ್ಲಿ ಹಂಸಗಳು—ಹಿಮಾಲಯದಲ್ಲಿನ ಮಾನಸಸರೋವರಕ್ಕೆ ಕಾತರಿಸುತ್ತಾ)

### ಹಂಸಗಳು

(ಹಾಡು—೨)

ಕರೆವುದು ಹೈಮಾಚಲ ಸರ
ಕುವಲಯಬಂಧುಗಳೇ ಬರುವಿರಾ ?
॥ ಧ್ರುವ ॥

ಮಂಜಿನ ಸೆರೆಯನು ಕಳೆದಿರೆ ರವಿಕರ
ನೀರೋಟಗಳಿಗೊ ಧುಮುಕುತಿವೆ
ನೆಗೆದು ನೆಗೆದು ಬರಸೆಳೆದಪ್ಪುವ ತೆರೆ-
ತೆಕ್ಕೆಯೊಳಗೆ ಸಲ್ಲಪಿಸುತಿವೆ
ತಡೆಯಿರದೆ
ದಣಕಲೆವ
ಅಲೆಗಳ ಬೇಸರ ಕಳೆಯುವಿರಾ ?
ಬರಿನೀಲದ ತೆಳುನೀರಿನ ಹರಹಿನ
ಬೆಳುಪಿನ ತೆರಪನು ತುಂಬುವಿರಾ ?
॥ ಕರೆವುದು—

ನೀರಿನೆಳೆಯ ತಂಬೂರಿಯ ಮೀಟುತ
ಶ್ರುತಿ ನುಡಿಸುವ ಪಾದಗಳೆಲ್ಲಿ ?
ಕೊರಳ ಬಳುಕಿನೊಳೆ ತಾಳವನಂಕಿಸಿ
ನಡೆಯ ತೋರ್ವ ಜಿನದಿಗಳೆಲ್ಲಿ ?
ಚಂಚಲ ಜಲದಲ್ಲಿ
ಬಿಂಬವ ಚೆಲ್ಲಿ
ಎದೆಯೊಳಗಣ ಬರಿ ಮೂಕ ಭಾವಗಳೆ
ರೇಖೆಗೊಳುವ ಪರಿ ನೆರಳಿಂದೇಳುತ
ತೇಲುವ ಚಂದಿಗರೆಲ್ಲಿ ?
॥ ಕರೆವುದು—

ಹಾರಿ ಹಾರಿ ಸಾವಿರ ನೂರ ಕಳೆದೇರಿಯೇರಿ ನಭಕೆ
ದೂರ ದೂರ ಕಾಸಾರ ತೀರಕೋಗುಡುತ ಸೇರುವುದಕೆ
ನೀಳ್ಕೊರಳೊಳು ಗಾಳಿಯು ಕೊರೆದಾಗಸದೊಳು ಬಳಿಮಾಡಿ
ನೀಲಾಂಬರಕಾಗಲು ಜಾಲಿಯ ಹೂವಾಲೆಯ ಮೋಡಿ
ಉತ್ತರದುತ್ತರದತ್ತಣ
ನಗದೊತ್ತಡದೊಳಗಿರುವ
ಸುಮನಸರೆತ್ತಲು ನೆರೆವ
ಕಿನ್ನರಿಕಿನ್ನರರೊಲಿವ
ಸರದೆಡೆಗೋವೋ
ಸಾರುವೆವೋವೋ

॥ ಕರೆವುದು

ಹಂಸ

(ಕೆಳಗಡೆಯ ಉದ್ಯಾನವನ್ನು ನೋಡಿ)

ಬಡಿವ ರೆಕ್ಕೆಗಳ ಅಕ್ಕಪಕ್ಕದೊಳು
ನಿಡಿದುಸುಯ್ಯುತಿದೆ ಗಾಳಿ
ಇಮ್ಮಡಿಸಿತದರ ದಾಳಿ
ತಲದ ಕಮಲವನ ದಣಿವ ಕೆರಳಿಸಿದೆ
ಬಿಡುವಿನೆಡೆಯ ತೋರಿ
ಬಗೆ ಹೋಪುದತ್ತ ಜಾರಿ.

ಹಂಸಗಳು

ಹೋಹೋ ಬಗೆ ಪೋಪುದತ್ತ ಜಾರಿ.

ಹಂಸ

ತಡಿಯ ಹೆಮ್ಮರದ ನೆರಳ ದೋಲಿಸುತ
ಒಳಗೆ ಬರುವ ತೆರೆಯ
ಕರದೊಳಾಂತು "ನೀನೆನ್ನ ರತುನವೇ"

ಎನುವ ತಾವರೆಯ ಮರೆಯ
ಸೇರಿ ದಣಿವ ಕಳೆದು ಸ-
ಮ್ಮಾಯಸವ ನಿದ್ದೆಗೆರೆದು
ನಾಳೆ ಪಯಣಕನುವಪ್ಪ ಬನ್ನಿರೇ
ಇಂದು ತೋಪಿಗಿಳಿದು.

ಹಂಸಗಳು

ಇಂದಿಲ್ಲಿ ಬಿಡುವು ಮುಂದಕ್ಕೆ ಪಯಣ
ಎಂದೆಂಬ ಬನದ ಕರೆಯ
ಮನ್ನಿಸುತ, ಈಗ ಭಾವಿಸುವ ಹೂವ
ಹೊಂಗನಸನಾಂತ ಕೆರೆಯ.
(ಹಂಸಗಳು ಮೇಲಿಂದಿಳಿದು ತಂಗುತ್ತವೆ)

(ನಳ ವಿದೂಷಕನೊಡಗೆ ಪ್ರವೇಶಿಸುತ್ತಾನೆ, ಅರಮನೆಯ ಉದ್ಯಾನವನದಲ್ಲಿ)

ನಳ

ವಯಸ್ಯ, ನಮ್ಮ ವನವನ್ನು ನೋಡಿದೆಯಾ, ನಡುಹಗಲಿನಲ್ಲೂ ಎಷ್ಟು ಪ್ರಶಾಂತವಾಗಿದೆ! ಈ ವೇಳೆಯಲ್ಲಿ ನಾವು ಹಿಂದೆ ಎಂದೂ ಇಲ್ಲಿಗೆ ಬಂದುದು ನೆನಪಿಲ್ಲ. ಆದರಿಂದಲೇ ಏನೋ ಇದು ಪ್ರಥಮದರ್ಶನದ ರಮ್ಯತೆಯನ್ನು ಮೆರೆಸುತ್ತಿದೆ.

(ರಾಗ—ಸೌರಾಷ್ಟ್ರ)

(ವೃತ್ತ) ಸುದೀರ್ಘ ಪ್ರಾಲಂಬ ಪ್ರಸೃತ ವಿಟಪಂ ಪಾದಪಮಹೋ
ಪ್ರಸೂನಪ್ರದ್ಯೋತಂ ಗಗನಪರಿಕರ್ಮ ಪ್ರಚಲಿತಂ,
ಸರಂ ಜ್ಯೋತಿಶ್ಯಯ್ಯಾಸನ, ಸುಪಿಹಿತಂ ಪಾಲಕಮನಂ,
ವನಂ ನಮ್ಮಾತಿಥ್ಯಕ್ಕನುಮತಿಸಿ ಬಂದಂತಿದೆ, ಸಖ!

ವಿದೂಷಕ

ಅಹುದು,ಮಿತ್ರಾ, ಅಹುದು, ಇದು ದೊಡ್ಡಕಾಡಿನ ಹಾಗೂ ಇದೆ; ಹಾಗೂ ಇಲ್ಲ. ನಿನ್ನಂಥವನಿಗೆ ಉದ್ಯಾನವನ, ನನ್ನಂಥವನಿಗೆ ಕಾಡು. ಈ ಬಂಡೆಗಳು,

ಆ ಬಿದಿರಿನ ಮೆಳೆಗಳು, ಮರಳಂಚಿನ ಕೆರೆ,—ನಮ್ಮ ವನಪಾಲಕರ ಕಲೆಗೆ ಭಲೆ ಎನ್ನಬೇಕು. ಗೆಡ್ಡೆಗೆಣಸು ತಿನ್ನುತ್ತಾ ಜಟಾಭಸ್ಮಗಳನ್ನು ಧರಿಸಿರುವ ಋಷಿಗಳು ನಮ್ಮ ಅರಮನೆಗೆ ಬಂದು ಮೋದಕಗಳನ್ನೂ, ಮಿಷ್ಟಾನ್ನವನ್ನೂ ಮೆದ್ದು ನಮ್ಮನ್ನು ಅನುಗ್ರಹಿಸುವಂತೆ, ಈ ಹೆಮ್ಮರಗಳೂ, ಹೊದರುಗಳೂ, ಮೆಳೆಗಳೂ ನಮ್ಮ ತೋಟಗಾರರ ಆತಿಥ್ಯವನ್ನು ಪಡೆದು ಒಳ್ಳೆಯ ಮೋಜಿನಲ್ಲಿವೆ. ಉದ್ಯಾನ ಪ್ರಸನ್ನವಾಗಿದ್ದರೂ ತನ್ನ ಕಾಡುತನವನ್ನು ಕಳೆದುಕೊಂಡಿಲ್ಲ. ಅದು ಸರಿ, ಮಧ್ಯಾಹ್ನ ಸ್ವಲ್ಪ ನಿದ್ದೆಮಾಡೋಣ ಎಂದಿದ್ದರೆ ನನ್ನನ್ನೇಕೆ ಇಲ್ಲಿಗೆ ಕರೆತಂದೆ ?

ನಳ

ನನ್ನ ಮನಸ್ಸಿನ ಪರಿಸ್ಥಿತಿಯನ್ನು ನಿನಗೆ ನಾನೆಷ್ಟು ಬಣ್ಣಿಸಿದರೂ ನಿನಗದರ ಅರಿವಾಗುವಂತಿಲ್ಲ ; ಅದು ನನಗೇ ಅಸ್ಪಷ್ಟ !

(ರಾಗ—ಧನ್ಯಾಸಿ)

(ವೃತ್ತ) ಇರುಳಿನೊಳು ತಾರೆಗಳ ನಡುವಿರುವ ಕತ್ತಲೊಳು
ಏನನೋ ಹುಡುಕುವಂತಲೆವುದೆನ್ನ ಬಗೆ
ಧಾವಿಸುವುದದು ಬೆಳಗು ಮೂಡದೆಸೆ ರಂಗುಬೆಳ-
ಕಾಗಸದ ನೀಲದೊಳು ಬಯಲಾಗುವೆಡೆಗೆ.
ಬೈಗಿನೊಳಗೆಳವೆರೆಯ ಬಟ್ಟಲಿಂ ತೊಟ್ಟಿಡುವ
ಬೆಳ್ಳಿಯನು ಕಂಡದನು ತುಳುಕಿಸುವರಾರು
ಎಂದು ಸುಯ್ವುದು, ಇಂದು ಹೂಗುರುಳ ಹೆಮ್ಮರಗ-
ಳಾಚೆ ಬಾನಾದುದೀ ಹಂಬಲಕೆ ತವರು

ವಿದೂಷಕ

ಹಾಗಾದರೆ, ಹೀಗೆ ಅಲೆದಾಡುವ ನಿನ್ನ ಮನಸ್ಸನ್ನು ತಡೆದಿಡಬಲ್ಲ ವಸ್ತು ಎಲ್ಲೋ ದೂರದಲ್ಲಿರಬೇಕು, ಮಿತ್ರ. ಎಲ್ಲಿದೆ ಹೇಳು, ಅದನ್ನು ಇಲ್ಲಿಗೇ ತಂದು ನಿನ್ನ ಮನಸ್ಸನ್ನು ಕಟ್ಟಿಹಾಕೋಣ.

ನಳ

ಇದಕ್ಕೆ ಏತರ ಆಸೆ, ಏನು ಗುರಿ, ಅದನ್ನು ಅರಿಯುವುದೆಂತು?

(ಹಾಡು—೩)

ಮನದ ತೆರವನರಿವರಾರು
ಕನಸಿನ ನೆಲೆ ಅದು ॥ ಪ ॥
ಬಯಸಿದರೂ ಬಯಕೆಯರಿಯು-
ದರಕೆಯೊಂದನರಿಯುವಂಥ—॥ ಅನು ಪ ॥

ಕಂಗಳ ಸೆರಗ ಹಿಡಿದೆಳೆವಂದದ
ಚೆಲುವಿನ ಇವು ಅವುಗಳ
ಅಲ್ಲಗಳೆದು ಎಲ್ಲ ಇಂಪ-
ನೊಲ್ಲದೆಲ್ಲೊ ಅಲೆಯುವಿಂಥ—
॥ ಮನದ ತೆರವ—

ತುಂಬಿಬರುವ ಹರಣಕಿಳೆಯು
ತುಂಬಿನಿಂಬೆ ತಪ್ಪಿತೊ
ಎಂಬ ಪರಿಯೊಳಾಲಂಬನ-
ಕಾವುದನೂ ಕಾಣದಲೆವ—
॥ ಮನದ ತೆರವ—

ಬೆಳಕಿನ ಹಿಗ್ಗು ಬಣ್ಣದ ಹಿಗ್ಗು
ಕಂಪಿನ ಹಿಗ್ಗು ಸಿರಿಗಳ
ಸುಗ್ಗಿಯ ವೆಗ್ಗಳದಿರವಿನ ಹಿಗ್ಗಿಗೆ
ಒಂದೇ ಇರವು ಸಾಲದೆಂಬ
॥ ಮನದ ತೆರವ—

(ವೃಂದ ಪಲ್ಲವಿ, ಅನುಪಲ್ಲವಿಗಳನ್ನು ಹಾಡಿದ ಮೇಲೆ. ಕೀರವಾಣಿಯ ಆಲಾಪನೆಯ ಲಹರಿಯೊಂದು ಕೇಳಿಬರುತ್ತದೆ.)

**ನಳ**

(ಆಲಾಪನೆಯನ್ನು ಆಲಿಸುತ್ತಾ)

ಆಹಾ, ಮನೋಗತಗಾನವೇ,

(ರಾಗ—ಕಲ್ಯಾಣಿ)

(ವೃತ್ತ) ಧರೆಯ ವಿಷಯಂಗಳನು ಕಡೆದೀ ಸೊದೆಯ ಹೃದಯಂ ಕೊಂಡುದೋ
ಸ್ವರದ ಕಿರಣಾವಳಿಯೊಳರಿವುಂ ದಿವದೊಸಗೆಯಂ ಕಂಡುದೋ
ಪಡೆವುದಿದರಿಂದಿರವು ಶಮವಂ ಅಸುಖವನು ತಾಂ ಸುಖದೊಳು
ಮನದರಕೆಯಂ ಲಿಖಿಪುದೆಂಬೆಂ ಬಗೆಯೊಳಲೆವೀ ಇಂಚರಂ.

**ವಿದೂಷಕ**

ಮಿತ್ರಾ, ಹೀಗೆ ನಿನ್ನ ಮನಸ್ಸಿನಲ್ಲೇ ಗುಯಿಗುಟ್ಟುವ ಸಂಗೀತವನ್ನು ಆಲಿಸುತ್ತಾ ಅವನ್ನೇ ಬಣ್ಣಿಸುತ್ತಾ ನಿಂತಲ್ಲಿಯೇ ನಿಂತರೆ ನನ್ನ ಗತಿ ಏನಾಗಬೇಕು? ರೆಪ್ಪೆ ಮಿಟುಕಿಸಿ ಮೇಲುಗಣ್ಣನ್ನು ಮುಚ್ಚುತ್ತೇನೆ. ಇಕೋ ನನ್ನನ್ನು ನೋಡು; ಕನಿಕರಿಸು, ನನ್ನ ರೆಪ್ಪೆಯ ಮೇಲೆ ಮಳೆಯಂಥ ನಿದ್ರೆ—ಬಾ, ಆ ತಾವರೆಯ ಕೆರೆಯ ಹತ್ತಿರ ಒಂದು ದೊಡ್ಡ ಕಲ್ಲುಮಂಚವಿದೆ, ಅದರ ಮೇಲೆ ನಾನು ಸ್ವಲ್ಪ ವಿಶ್ರಮಿಸಿಕೊಳ್ಳುತ್ತೇನೆ. ನೀನೂ ಹತ್ತಿರ ಕುಳಿತು, ಬೇಕಾದರೆ ಮನಸ್ಸಿನಲ್ಲೇ ಹಾಡಿಕೊ ; ಇಲ್ಲ, ಕೆರೆಯಲ್ಲಿ ಅರಳಿರುವ ತಾವರೆ ಹೂಗಳನ್ನು ನೋಡಿ ನೀನು ವರಿಸ ಬಯಸುವ ಹೆಣ್ಣಿನ ರೂಪವನ್ನಾದರೂ ರೇಖಿಸು. ಬಾ, ಬಾ, ಈ ಕಡೆ ದಾರಿ, ಈ ಕಡೆ—(ಪಿಸುಮಾತಿನಲ್ಲಿ) ಅಲ್ಲಿ ನೋಡಿದೆಯಾ, ಹಂಸಗಳು! ಹಿಂಡುಹಿಂಡಾಗಿ ಮಲಗಿವೆ. ಕಾಡಿನ ಕೆರೆ ಎಂದು ತಿಳಿದುಕೊಂಡುವೋ ಏನೋ. ನಿರ್ಭಯವಾಗಿ ಮಲಗಿವೆ. (ನಳ ಹಂಸಗಳ ಕಡೆಗೆ ಸದ್ದಿಲ್ಲದೆ ನುರಿತ ಬೇಟೆಗಾರನ ಸುಳುವಿನಲ್ಲಿ ಹೋಗುತ್ತಾನೆ.) ಮೆಲ್ಲಗೆ, ಮಿತ್ರಾ, ಮೆಲ್ಲಗೆ, ಕುಕ್ಕಿದರೇನು ಗತಿ ? ರೆಕ್ಕೆಯೇಟು ಬಲುಗಡಸು, ಜೋಕೆ, ಜೋಕೆ—(ತನಗೆ ತಾನೆ) ಒಳ್ಳೆ ಬೇಟೆಗಾರನಿಗೆ ನನ್ನ ಎಚ್ಚರಿಕೆ ಏಕೆ,—ಇನ್ನು ಈ ವ್ಯಸನ ಈತನಿಗಂಟಿತು, ನಾನು ಕಲ್ಲುಮಂಚವನ್ನಾಶ್ರಯಿಸುವುದು ಲೇಸು. (ಹೋಗುತ್ತಾನೆ.)

(ಸ್ವಲ್ಪ ಹೊತ್ತಾದ ಮೇಲೆ ದೂರದಲ್ಲಿ ಹಂಸಗಳ ಚೀತ್ಕೃತಿ. ಒಂದೆರಡು ಧ್ವನಿಗಳು ಹೆಚ್ಚು ಸ್ಪಷ್ಟವಾಗಿ ಆರ್ತವಾಗಿ ಕೇಳಬರುತ್ತವೆ.)

ಹಂಸ

(ನಳನ ಹಿಡಿತದಲ್ಲಿ)

ಕಾಪಾಡು, ಮಹಾರಾಜ, ಕಾಪಾಡು ; ನಿನ್ನ ಅತಿಥಿ ನಾನು, ಕೊಲ್ಲದಿರು ಕೊಲ್ಲದಿರು.

ನಳ

(ನಗುತ್ತಾ)

ನಿಜ, ನಿಜ, ಪ್ರಿಯಾತಿಥಿ ನೀನು. ಅಂಜದಿರಂಜದಿರು, ಅಹಹಾ, ಎಲೆ ಚೆಂದುಳ್ಳ ಹಕ್ಕಿಯೇ, ನಮ್ಮ ನುಡಿಯನ್ನು ಎಲ್ಲಿ ಕಲಿತೆ ? ನೀನು ಸರಸ್ವತಿಯ ಹಂಸದ ಬಳಗವೇ ?

(ರಾಗ—ನಾಟಕುರಂಜಿ)

(ವೃತ್ತ) ಜಗದಿತರವಸ್ತುಗಳ ಚೆಲುವ ಶಂಕಿಸುವಂಥ ಕೊರಲ ಕೊಂಕು
ಬೆಳ್ಳಿ ಬೆಳ್ಮಲರು ಬೆಳುದಿಂಗಳೀ ಮೈಯ ಬೆಳುಪಿದಿರು ಮಂಕು
ಡೊಂಕುಲೇಖೆಗಳೆಲ್ಲ ಚೆಲುವಿನಂಕೆಗೆ ಸಂದು ಬಿಂಕದೊಳಗೆ
ಮಿಕ್ಕೆಲ್ಲ ರೂಪಗಳ ನಗುತಲಿವೆ ನಿನ್ನ ಸಂಗಡಿಕೆಯೊಳಗೆ.

ಎಲೆ ಮುದ್ದುಹಕ್ಕಿ, ನಿನ್ನನ್ನು ನೋಡುನೋಡುತ್ತಿದ್ದರೆ, ಆವುದೋ ಅರಕೆ ತುಂಬಿ ಬರುವಂತಿದೆ, ರಾಜಹಂಸ.

(ರಾಗ—ಹಿಂದೋಳ)

(ವೃತ್ತ) ಹೆಮ್ಮೆಲೆಯ ಘನತೆಯನು ಬೆಳ್ಮುಗಿಲ ಲಘಿಮೆಯನು
ಬಾಂದಳದ ಬಿತ್ತರವ ದಿವದೆತ್ತರವನು
ಮಲರಿನುಲ್ಲಸಿಕೆಯನು ಜಲದ ಮಂಗಲವನ್ನು
ನಿನ್ನ ಹಿಡಿದೊಂದೆ ಹಿಡಿಯೊಳೆ ಹಿಡಿದೆನೆಂಬೆ.

ಹಂಸ

ಧೀರ, ಸುಂದರ ಪುರುಷ, ಮೆಚ್ಚುನುಡಿ ಸವಿಗಾರ, ನೀ ಉದಾರ
ಬಲು ನಾಡುಗಳ ತಿರಿನು ಬಹು ಜನವ ಕಂಡಿರುವ
ನನ್ನ ನುಡಿ ಮೆಚ್ಚಲ್ಲ, ನನ್ನಿಯಿದು. ಕೇಳಿದೋ
ಗಂಡುಜಾತಿಯೊಳಿಲ್ಲ ನಿನ್ನತೆರ ಇನ್ನೊಬ್ಬ ದೊರೆಕುವರಾರ,

ನಳ

(ನಗುತ್ತಾ)

ಎಲೆ ಹಂಸ, ನನ್ನ ಸಮರಿಹರೆಂಬೆಯಾ ಹೆಂಗಳೊಳಗೆ ?

ಹಂಸ

ಇಹಳಿಹಳು,

ಅವಳಂತೆ ಇನ್ನೊಬ್ಬಳಬಲೆಜಾತಿಯೊಳಿಲ್ಲ,
ಅದ್ವಿತೀಯಳು ಆಕೆ, ಅದ್ವಿತೀಯನು ನೀನು
ಅದರಿನಿಂತೆಂಬೆ.

(ಹಾಡು_೪)

ನಿಂದೆಡೆಯನು ತುಂಬುವ ಸುಂದರನೇ
ಕಂಡಿಹೆ ನಿನಗೆಣೆಯಾಕೆಯನು ॥ ಪ ॥
ಸಂದೆಗವಿಲ್ಲವು ರಾಜಕುವರ ನಿ_
ನ್ನಿರವಿನರಕೆ ಪೂರೈಕೆಯನು ॥ ಅನು ಪ ॥

ಕಳೆಮೊಗದೊಳು ಬೆಳಕಾಡುವ ಕಣ್ಣೊಳು
ಚೆಂದುಟಿಯೆಳನಗೆ ಹೊಳಹಿನೊಳು
ಕೆನ್ನೆಯ ಕುಳಿಯೊಳು ಗಲ್ಲದ ಸುಳಿಯೊಳು
ಹ್ರೀಶ್ರೀಕೀರ್ತಿಗಳೆಸೆವ ಚೆನ್ನೆಯನು
ಕಂಡಿಹೆ ನಿನಗೆಣೆಯಾಕೆಯನು
॥ ನಿಂದೆಡೆ—

ಪಚ್ಚೆಮುತ್ತುಹರಳೋಲೆ ಕಪೋಲಕೆ
ಕಾಂತಿಯ ಕಂದಲಿಕೆಯ ರಚಿಸೆ
ಕೊರಲ ಒಣ್ಣವನು ಮಣಿಸರ ಮಡುಗೊಂ-
ಡುಬ್ಬಿನೆದೆಯ ಕೊಂಡಾಟದೊಳಲುಗುವ
ಕಂಡಿಹೆ ನಿನಗೆಣೆಯಾಕೆಯನು
॥ ನಿಂದೆಡೆ—

ನೋಡಿ ನೋಡಿ ನಾ ಮಚ್ಚರಿಸುವ ನಡೆ
ಹಕ್ಕಿಯಿಂಚರವ ಜರೆವ ನುಡಿ
ರೆಕ್ಕೆಗೊಳದೆ ಮೇಲೆಲರಿನೊಳಾಡುವ
ಹರುಷದ ಹಗುರಿನ ಲಗುಬಗೆಯವಳನು
ಕಂಡಿಹೆ ನಿನಗೇಣೆಯಾಕೆಯನು
॥ ನಿಂದೆಡೆ—
ಹಾಸವಿಲಾಸದಿ ಒಳ್ನಡೆ ನುಡಿಯೊಳು
ಸಹಜವಿನಯ ಸರಳತೆಯೊಳಗೆ
ಗುರುಹಿರಿಯರ ಪರಿಜನರ ಸಖಿಯರ
ಬಳಿಗೆ ಬಹರನುತ್ತೇಜಿಸಿ ನಲಿಸುವ
ಕಂಡಿಹೆ ನಿನಗೇಣೆಯಾಕೆಯನು
॥ ನಿಂದಡೆ—
ಅಣ್ಣತಮ್ಮರೆಂದೆಲ್ಲರ ಭಾವಿಸಿ
ಗಂಡೆನೆ ಬಿಗುಮಾನದೊಳಿರುವ,
ಚೆಲುವ ಕಂಡವನೆ, ನೀನೇ ಈ ಮೈ
ಮನವೊಂದೆಡೆಗೆಂತಾದುದೆಂಬವಳ
ಕಂಡಿಹೆ ನಿನಗೇಣೆಯಾಕೆಯನು —
ನೀದೆಡೆಯನು ತುಂಬುವ ಸುಂದರನೇ
ಕಂಡಿಹೆ ನಿನಗೇಣೆಯಾಕೆಯನು
ಸಂದೆಗವಿಲ್ಲವು ರಾಜಕುಮಾರನೆ;
ನಿನ್ನರಕೆಯ ಪೂರೈಕೆಯನು
ಕಂಡಿಹೆ ನಿನಗೇಣೆಯಾಕೆಯನು.

ನಳ

ಕಲಹಂಸ, ಏನು ಹೇಳಿದೆಯೋ,
ಕಾಡಿನ ಹಕ್ಕಿ ನೀ ಬೇಡಿನವಳ ಕೊಂ-
ಡಾಡುವಚ್ಚರಿಗೆ ಏನೆಂಬೆ,
ರೂಢಿಯಲ್ಲವೀ ಮೋಡಿ ನಿನ್ನದು
ಗಾಡಿಕಾತಿಯಿಹುದನು ನಂಬೆ —

ಹಂಸ

ಸರಸತಿಯಂಚೆಯು ಬಳಗವೆಂದು ನೀ
ಕರೆದೆನಗಿತ್ತುದು ಬರಿಬಿರುದೇ ?
ಸರಗಳಿಡೆಗೆ ಬರುವರಸುಕುವರಿಯರ
ಪರಿಯನರಿಯೆ ಹೇಳೆನಗರಿದೆ ?

ನಳ

(ಹಾಡು)

ಏನೋರೆದೆ ಬಾನಂಚಿನಂಚೇ,
ನಲ್ನುಡಿಯ ಸಂಚೇ,
ನೀ ಬಲುಬಣ್ಣಿಸಿದ ಚೆಲುವವಳು
ನೆಲದವಳೋ, ಜಲದವಳೋ, ಮುಗಿಲವಳೋ —
ಚೆದರಿರುವೆನ್ನಾಸೆಗಳ ಜೋಡಿಸುತಿಹೆಯೋ
ಕಣಸನು ಕೂಡಿಸುತಿಹೆಯೋ
ನುಡಿಮಿಂಚಿನ ರೇಖೆಯೊಳು ರೇಖಿಸಿಹ
ಕನಸಿದು ದಿಟವೇ ?
॥ ಏನೊರೆದೆ—
ದಿಟವೋ ಸಟೆಯೋ, ನನಗೇನು.
ದಿಟವಾದರು ಆ ಬಿಂಕದ ಹೆಣ್ಣು
ನನಗೊಲಿವಂಥವಳೆ ?
ಇದ ಮರೆವುದೆ ಜಾಣು—

ಏನೊರೆದೆ ದಿವದಂಚಿನಂಚೇ
ಸವಿನುಡಿಯ ಸಂಚೇ,
ನನ್ನಿಂ ಬಿಡುಗಡೆಗೆ
ಇದು ನಿನ್ನಯ ಹವಣು—
॥ ಏನೊರೆದೆ—

ಹಂಸ

ಸಂದೆಗಗೊಳ್ಳದಿರ್ಕೈ, ಚೆಲುವ,
ಹೆಣ್ಣಾವಳು ಒಲ್ಲಳು ನಿನ್ನೊಲವ ?
ಅರಿಯಳು ಆಕೆ ನಿನ್ನಂಥವನಿರವ.
ಪೆಸರಿಗೆ ತಕ್ಕ
ದಮಯಿಂತಿಗು ಮಿಕ್ಕವ ನೀ
ಕೈಬಿಡು, ಪಕ್ಕವಗೊಳುವೆ
ನೀನಿಹುದಾಕೆಗೆ ಒರೆವೆ.
ಸಂದೆಗಗೊಳ್ಳದಿರ್ಕೈ, ಚೆಲುವ
ಹೆಣ್ಣಾವಳು ಒಲ್ಲಳು ನಿನ್ನೊಲವ ?

ನಳ

(ಕೈಬಿಡುತ್ತಾ)

ಹೋಗು, ಕಲಹಂಸ, ಹೋಗು ಮನಬಂದೆಡೆಗೆ ಹೋಗು—

(ಹಾಡು–೬)

ಪೋ ಪೋ ಪೋ ಹಂಸ
ಆಗಸದವತಂಸ,
ಪೋ, ಸುಖಿಯಾಗೆಲೆ, ಮಾನಸಸಖಿಯೋ
ಪೋಗು, ಪೋಗು, ಮನಬರುವೊಡೆ ಪೇಳಾ
ದಮಯಂತಿಗೆ ನಳನೆಂಬನ ತೆರವನು
ಪೋ, ಪೋ, ಪೋ ಹಂಸ
ಆಗಸದವತಂಸ.

ಹಂಸ

(ಮೇಲೆ ಹಾರಿ)

ಪೋಪೆ ಪೋಪೆ ಪೋಪೆ, ಅರಸೆ,
ಆ ಹೆಣ್ಣು ನಿನ್ನನೆ ವರಿಸೆ
ಪೋಗಿ ಪೇಳಿ ನಿನ್ನಿರವಿನ ತೆರವನು

ಭಾಮಿನಿಯೆದೆಯನು ತೆರೆವೆನು ನಿನಗೆ
ಪೋಪೆ ಪೋಪೆ ಹರಸುತ ಅರಸೆ
ಆ ಹೆಣ್ಣು ನಿನ್ನನೆ ವರಿಸೆ.

ಹಂಸಗಳು

(ದೂರದಲ್ಲಿ ತೋರಿ)

ಪೋಪೆವು ಪೋಪೆವು ಹರಸುತ ಅರಸೆ,
ಆ ಹೆಣ್ಣು ನಿನ್ನನೆ ವರಿಸೆ,
ಪೋಗಿ ಪೇಳಿ ನಿನ್ನರವಿನ ಪರಿಯನು
ಕಾಮಿನಿಯೆದೆಯನು ತೆರೆವೆವು ನಿನಗೆ.
ಪೋಪೆವು ಪೋಪೆವು ಹರಸುತ ಅರಸೆ
ಆ ಹೆಣ್ಣು ನಿನ್ನನೆ ವರಿಸೆ.

ನಳ

(ರಾಗ–ಪೀಲು)

(ವೃತ್ತ) ವ್ಯೋಮದಂತರ್ಯಾಮಿ ಶುಭ್ರತನು ಪಕ್ಷಶಾಲಿ
ಕಾಮವನು ಕೊಂಡೊಯ್ಯುವುದೋ ರಕ್ತಚಂಚುಪುಟದಿ
ನಿರ್ಬದ್ಧನಿರ್ವೇದದೊಳಗೆಲ್ಲು ರಮಿಸದ ಮನ
ನಿರ್ಬದ್ಧವಾಯ್ತು ದಮಯಂತಿ ಎಂಬೀ ನಾಮದಿ.

ವಿದೂಷಕ

(ದೂರದಲ್ಲಿ)

ಹಕ್ಕಿಗಳ ಬೇಟೆ ಮುಗಿಯಲಿಲ್ಲವೇ ಮಿತ್ರಾ ?

## ದೃಶ್ಯ ೩

(ದಮಯಂತಿಯ ಅಂತಃಪುರದ ಉದ್ಯಾನವನದಲ್ಲಿ ದಮಯಂತಿ ಮತ್ತು ಸಖಿಯರು.)

### ದಮಯಂತಿ

(ಹಾಡು—೭)

ಸಂಜೆಬಿನದಕೆ ಬನ್ನಿರೇ, ಸಖಿ, ಬನ್ನಿರೇ
ದುಂಡುಮಲ್ಲಿಗೆಮುಗುಳಿನ ಚೆಂಡ ತನ್ನಿರೇ,
ಸಖಿ ತನ್ನಿರೇ, ಸಖಿ ತನ್ನಿರೇ—
ತೋಟದ ಬಯಲೊಳು ಸೇರಿರೆ
ಕೂಟದ ಗೆಲುವನು ತೋರಿರೆ—ನಮ-
ಗಾಟದಿ ಜಯವನು ಕೋರಿರೆ
ಮುಗಿವವಮುನ್ನ ಚೆಂದಾವರೆ.

### ಸಖಿಯರು

ಸಂಜೆಬಿನದಕೆ ಬನ್ನಿರೇ, ಸಖಿ ಬನ್ನಿರೇ
ದುಂಡುಮಲ್ಲಿಗೆಮುಗುಳಿನ ಚೆಂಡ ತನ್ನಿರೇ ಸಖಿ ತನ್ನಿರೇ —

### ಮತ್ತೊಂದು ತಂಡ

ಬಂದೆವಿದೋ ಬಂದೆವಿದೋ ಇದೋ ಇದೋ ಇದೋ
ತಂದೆವಿದೋ ಚೆಂಡ ತಂದೆವಿದೋ ಇದೋ ಇದೋ ಇದೋ
ದುಂಡುಮಲ್ಲಿಗೆಯ ಚೆಂಡನು
ದಂಡೆಯ ಹೂಗಳ ದುಂಡನು
ಅಂಗೈಯೇಟಿಗೆ ಚಂಗನೆ ನೆಗೆವ
ರೇಶಿಮೆಹೋಲಿಗೆಯ ಚೆಂಡನು
ಮಿಂಸುನಿಯ ಕಸ್ತೂರಿಯ ದುಂಡನು
ದಮಯಂತಿಯ ಬಿನದಕೆ ತಂದೆವಿದೋ-

ಮೊತ್ತ

ಸಂಜೆಬಿನದಕೆ ಬನ್ನಿರೇ ಸಖಿ ಬನ್ನಿರೇ ಸಖಿ ಬನ್ನಿರೇ
ದುಂಡುಮಲ್ಲಿಗೆಮುಗುಳಿನ ಚೆಂಡ ತನ್ನಿರೇ ಸಖಿ ತನ್ನಿರೇ
ಸಖಿ ತನ್ನಿರೇ.

ಒಂದು ತಂಡ

ಬಾ ವಿಮಲೇ ಬಾ ಕಮಲೇ ಬನ್ನಿರಿ ಬಾರೆ ಶಕುಂತಲೇ
ಆಟದ ಮೈಕುಲುಕಾಟದಿ ಕೆದರಲಿ ತಳಿರ ಸಿಂಗರದ ಮಿಂದಲೆ
ಸುಳಿಗುರುಳೊಳು ನರು-
ಬೆಳಕನು ಬೀರುವ
ಮಣಿಯನುರುಳಿಸಲಿ ಚೈತಲೆ
ಬಾ ವಿಮಲೇ ಬಾ ಕಮಲೇ ಬನ್ನಿರಿ ಬನ್ನಿ ಶಕುಂತಲೇ.

ಮೊತ್ತ

ಸಂಜೆಬಿನದಕೆ ಬನ್ನಿರೇ ಸಖಿ ಬನ್ನಿರೇ ಸಖಿ ಬನ್ನಿರೇ
ದುಂಡುಮಲ್ಲಿಗೆಮುಗುಳಿನ ದುಂಡ ತನ್ನಿರೇ,
ಸಖಿ ತನ್ನಿರೇ ಸಖಿ ತನ್ನಿರೇ.

ಒಂದು ತಂಡ

ದಳವ ತೆರೆದ ಅರವಿಂದವ ಕರದೊಳಗಾಡಿಸಿ ಮೈಯನು ತಾಕಿಸುತ-

ಮತ್ತೊಂದು ತಂಡ

ಮುಸುರುವಳಿಗೆ ಮಲ್ಲಳಿಗೊಳುವೊಲು ಮಾವಿನ ಮಂಜರಿಯನು ಸೋಕಿಸುತ-

ಮೊತ್ತ

ಮೆಲ್ಲಡಿಯೊದೆತವ ಮರಳಿಸುವಸುಗೆಯ
ಕನ್ನೈದಿಲೆ ಹೊಸಮಲ್ಲಿಗೆಯೊಸಗೆಯ
ಚೆಂಡಿನೇಟ ದಮಯಂತಿಗುಣಿಸಲು

ಸಂಜೆಬಿನದಕೆ ಬನ್ನಿರೇ ಸಖಿ ಬನ್ನಿರೇ ಸಖಿ ಬನ್ನಿರೇ
ದುಂಡುಮಲ್ಲಿಗೆಮುಗುಳಿನಚೆಂಡ ತನ್ನಿರೇ, ಸಖಿ ತನ್ನಿರೇ, ಸಖಿ ತನ್ನಿರೇ—

ವ್ಯಕ್ತಿ ೧

ನಡೆವಡೆ ನೆಲದೆದೆ ಜುಮ್ಮೆಂದಿತೊ ಎನೆ
ನೇವುರದಿನಿದನಿಯೇಳುತಿರೆ—

ವ್ಯಕ್ತಿ ೨

ಬಳುಕಿ ಬಳುಕಿ ಚೆಂಡಾಡುವ ಚಳಕವ
ಬಳೆಯಿಂಚರ ಬಲು ಹೊಗಳುತಿರೆ—

ಒಂದು ತಂಡ

ಜವ್ವನದೇರುವೆಯೆದೆಯ ತೇರಿಗೆ
ಹೂಡಿರುವಂಚೆಯ ವಾಘೆಯ ರೀತಿಗೆ
ಮುತ್ತಿನ ಹಾರವು ತೊನೆಯುತಿರೆ—

ಮತ್ತೊಂದು ತಂಡ

ಬೆಮರ್ವನಿ ಮೊಗದೊಳು ಮೂಡುತಿರೆ—ಚೆಂ-
ಬೆಳಕದರೊಳು ತುಳುಕಾಡುತಿರೆ—

ಮೊತ್ತ

ಬಿಡುಗಣ್ಣರು ಬಾಂದಳದೊಳು ನೆರೆದು
ನೋಡುವಂಥ ದಮಯಂತಿಯು ಬಿನದಕೆ

ಸಂಜೆಬಿನದಕೆ ಬನ್ನಿರೇ ಸಖಿ, ಬನ್ನಿರೇ ಸಖಿ, ಬನ್ನಿರೇ
ದುಂಡುಮಲ್ಲಿಗೆಮುಗುಳಿನ ಚೆಂಡ ತನ್ನಿರೇ, ಸಖಿ ತನ್ನಿರೇ, ಸಖಿ ತನ್ನಿರೇ—

ತೋಟದ ಬಯಲೊಳು ಸೇರಿರೆ
ಕೂಟದ ಬಿನದವ ತೋರಿರೆ
ನವಗಾಟದಿ ಗೆಲವನು ಕೋರಿರೆ
ಮುಗಿವ ಮುನ್ನ ಚೆಂದಾವರೆ.

ದಮಯಂತಿ

ಬನ್ನೀ ಸಖಿ, ಬನ್ನೀ ಸಖಿ, ಚೆಂದಾವರೆ ಬಿರಿವಲ್ಲಿಗೆ
ಮಂದಾನಿಲ ಸುಳಿವಲ್ಲಿಗೆ
ಇಮ್ಮಾವಿನ ಬಂಡಿನೊಳು ನೆಲಸಂಪಿಗೆ ನೆನೆವಲ್ಲಿಗೆ
ನನೆಗೊಂಚಲು ತೊನೆವಲ್ಲಿಗೆ
ಸುಗ್ಗಿಹಕ್ಕಿ ಕರೆವಲ್ಲಿಗೆ
ದುಂಬಿಸೊಕ್ಕಿ ಮೊರೆವಲ್ಲಿಗೆ
ಹಿಗ್ಗುಹರಸಿ ಬರುವಲ್ಲಿಗೆ
ಬೇಸರ ನಮ್ಮ ತೊರೆವಲ್ಲಿಗೆ
॥ ಬನ್ನೀ ಸಖಿ—

ಒಂದು ತಂಡ

ಬನ್ನೀ ಸಖಿ, ಬನ್ನೀ ಸಖಿ,
ಬೇಸರ ನಮ್ಮ ತೊರೆವಲ್ಲಿಗೆ
ಹಿಗ್ಗು ಹರಸಿ ಬರುವಲ್ಲಿಗೆ.

ಮೊತ್ತ

ಸಂಜೆಬಿನದಕೆ ಬನ್ನಿರೇ ಸಖಿ, ಸಖಿ ಬನ್ನಿರೇ, ಸಖಿ ಬನ್ನಿರೇ
ದುಂಡುಮುಗುಳಿನ ಮಲ್ಲಿಗೆ ಚೆಂಡ ತನ್ನಿರೇ ಸಖಿ ತನ್ನಿರೇ ಸಖಿ ತನ್ನಿರೇ.

ದಮಯಂತಿ

ಸಖಿಯರೇ, ಈ ಸಂಜೆ ನಮ್ಮ ತೋಟ ಎಷ್ಟು ಚೆನ್ನಾಗಿದೆ !

ರಾಗ–ಮುಖಾರಿ

(ವೃತ್ತ) ಮಿದುನೆಲದ ಮಮತೆಯನು ಪದಕೆರೆವ ಗರಿಕೆ
ಬಗೆಯನುಲ್ಲಸಗೊಳಿಪ ಕಮ್ಮಲರ ಸರಿಕೆ
ಸಂಜೆರಂಗಿನ ಸೆರಗ ಹಿಡಿದೆಳೆವ ಬಾನು
ಬಾನವರಿಗಲರೆತ್ತಿ ನಿಂತಿರುವ ಕಾನು—

ಅಕ್ಕೊ, ಅಕ್ಕೊ, ಗೆಳತಿ, ಆ ಹೆಮ್ಮರಗಳಂಚಿನಲ್ಲಿ—

(ಹಾಡು-೮)

ನೋಡು ಸಖಿ
ನೋಡುನೋಡದೋ
ಬಾನ ಮೋಡಿಯು
ಏನದೇನದು !
ಹಂಸ, ಹಂಸ, ಹಂಸ !
ಏನು ಚೆಲುವೇ,
ಎಂಥ ಚೆಲುವೇ,
ಹಂಸ, ಹಂಸ, ಹಂಸ !

ಸಖಿಯರು

ಏನು ಚೆಲುವೇ
ಎಂಥ ಚೆಲುವೇ
ಹಂಸ, ಹಂಸ, ಹಂಸ !

ದಮಯಂತಿ

ಬಿಳಿಮುಗಿಲು, ಬೆಳ್ಳಿಮುಗಿಲು
ಹರಣವ ಕೊಂಡಿಹುದೋ
ಸುಗ್ಗಿಯ ಕಮ್ಮೆಲರರಳೋ
ಏನಿದು ಎನೆ ಮನಂಗೊಳುವ—
ನೋಡು ಸಖಿ
ನೀಲದೊಳಗೆ
ಲೀಲೆಯಿಂದಲಿ
ತೇಲಿಬರುವೀ
ಹಂಸವನು ಹಂಸವನು ಹಂಸವನು—

ಸಖಿಯರು

ಏನು ಚೆಲುವೇ
ಎಂಥ ಚೆಲುವೇ
ಹಂಸ, ಹಂಸ, ಹಂಸ !

ದಮಯಂತಿ

ಇಂಗಡಲಿನ, ಸೊದೆಗಡಲಿನ
ಮೆಲ್ದೆರೆಯ ಸೆರಗೋ
ಶಚಿಕಿವಿಯಿಂ ಜಗುಳಿರುವ
ಮಂದಾರವೊ ಏನಿದಂ ಎನೆ
ನೋಡು ಸಖಿ
ನೋಡುನೋಡದೋ
ಮೋಡಿಯಂಚಿಯು
ಮೂಡಿಬರುವ ಕನಸು ಕನಸು ಕನಸು—

ಸಖಿಯರು

ಏನು ಚೆಲುವೇ
ಎಂಥ ಚೆಲುವೇ
ಹಂಸ, ಹಂಸ, ಹಂಸ !

ದಮಯಂತಿ

ಯಾರು ಬಿಟ್ಟರೇ—ಇದನಾರು ಬಿಟ್ಟರೇ
ಬಾನ್‌ಮನದೊಳಗೀ ಸ್ವಪ್ನವನಾರು ಬಿಟ್ಟರೇ
ಪೇಳಾರು ಬಿಟ್ಟರೇ ?
ವಾಗೀಶ್ವರಿಯೋ ಸಿರಿಯೋ ?
ಸ್ವಾಗತ ಸ್ವಾಗತ ನಿನಗೆ
ಸರೋವರದ ಸುಕುಮಾರಿಯೆ.

ನೋಡು ಸಖಿ
ನೋಡುನೋಡದೋ
ಬಾನೊಳಾಡುವೀ
ಹಂಸವನು, ಹಂಸವನು, ಹಂಸವನು !

ಸಖಿಯರು

ಏನು ಚೆಲುವೇ,
ಎಂಥ ಚೆಲುವೇ
ಹಂಸ, ಹಂಸ, ಹಂಸ !

ದಮಯಂತಿ

ಸರಳಿನಂತೆ
ಕೊರಳ ನೀಡಿ
ಬೆರಳನು ಬೀಣೆಯೊಳೆಂತೋ
ಗರಿಯನು ಗಾಳಿಯೊಳಲುಗಿಸಿ
॥ನೋಡು ಸಖಿ—

ಗೆಳತಿ, ಗೆಳತಿ, ನೋಡು ನೋಡು, ಅಂಬಿನೇಟಿಗೆ ಸಿಕ್ಕಿದಂತೆ ಇದೊ ಇದೊ ಇತ್ತೆಡೆಯೇ ಈ ಹಕ್ಕಿ ನೆಲಕ್ಕುರುಳಿ ಬಿದ್ದಿತಲ್ಲ! ಅಯ್ಯೊ, ಚೆಂದುಳ್ಳ ಹಕ್ಕಿಗೇನಾಯಿತೋ ಕಾಣೆ. ಬನ್ನಿ ಬನ್ನಿ ಹೋಗಿ ನೋಡೋಣ.

ಸಖಿಯರು

ಬನ್ನಿರೇ ಬನ್ನಿರೇ, ಅಗೊ ಅಲ್ಲಿ ಬಿದ್ದಿದೆ. ರೆಕ್ಕೆ ಬಡಿಯುತ್ತಿದೆ. ಹಕ್ಕಿ ಸಾಯಲಿಲ್ಲ, ಇದೊ ಸಿಕ್ಕಿತು ಸಿಕ್ಕಿತು. ಅಪ್ಪಾ, ಕೊಕ್ಕಿನಿಂದ ಕುಕ್ಕಿ ರೆಕ್ಕೆ ಬಡಿದು ಇದೋ ನುಸುಳಿತು. ನೆಲದ ಮೇಲೆ ಹಾರಿ ಹಾರಿ ಓಡುತ್ತಿದೆ. ಎಲೆ ತುಂಟ ಹಕ್ಕಿ, ನಿನಗೆ ನೋವಾಗಿರುವುದು ಬರಿ ನಟನೆ. ಬೆನ್ನಿಗೆ ಕೊರಲನ್ನು ಬಗ್ಗಿಸಿ ಬಿಂಕದ ಮೆಲುನಡೆಯನ್ನು ತೋರುವುದನ್ನು ಬಿಟ್ಟು ಹೀಗೆ ಕೊಕ್ಕರೆಯಂತೆ ಆಡುವುದೇ? ಎಲ ತುಂಟ ಹಕ್ಕಿ, ದಮಯಂತಿಯ ಕೈಗೆ ಮಾತ್ರ ಸಿಕ್ಕ

ಬೇಕೆಂದೋ ನಿನ್ನ ಆಸೆ? ಅವಳಿಗೂ ಸಿಕ್ಕಿ ಸಿಕ್ಕದಂತೆ ಮುಂದೆ ಮುಂದೆ ಓಡುತ್ತಿದೆಯಲ್ಲ.

ದಮಯಂತೀ, ದಮಯಂತೀ, ಹಕ್ಕಿಯನ್ನು ಹಿಂಬಾಲಿಸಿದುದು ಸಾಕು, ಹಿಂದಿರುಗು ಹಿಂದಿರುಗು!

ದಮಯಂತಿ

(ದೂರದಲ್ಲಿ)

ಅಂಜಿಕೆಯೇಕೆ, ಸಖಿ, ಇಗೊ ಇಗೊ ಸಿಕ್ಕಿಯೇ ಬಿಟ್ಟಿತು ಈ ತಕ್ಕಿನ ಹಕ್ಕಿ. (ಹತ್ತಿರದಲ್ಲಿ) ಸಿಕ್ಕಿ ಸಿಕ್ಕಿ ತಪ್ಪಿಸಿಕೊಳ್ಳುತ್ತೀಯಾ ಕೆಟ್ಟ ಹಕ್ಕಿ!

(ಹಾಡು—೯)

ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ
ದಕ್ಕದೆಯೆ ಪೋಪೆ ಕೈಮಿಕ್ಕಿಯೆ
ಪಕ್ಕೆ ಬಡಿದು ಕೊಕ್ಕಿನೋರೆ-
ಮಾಡಿ ನಕ್ಕು ನಡೆವೆ
ಕಕ್ಕುಲತೆಗೊಳ್ಳುವೆನ್ನೊ-
ಳುಕ್ಕಳಿಕೆ ತರುವೆ.

॥ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ—

ಹಂಸ

ಕಕ್ಕುಲತೆಯೆನ್ನೊಳೇಕೆ, ಚಿಕ್ಕವಳೆ
ಉಕ್ಕಳಿಕೆಗೊಳ್ಳು ನೀನು ತಕ್ಕನೊಳೆ.

ದಮಯಂತಿ

ಎಲೆ ದುಷ್ಟ ಹಕ್ಕಿ,

ತಕ್ಕವ ತಕ್ಕವನೆಂದು
ಚೆಕ್ಕಂದವಾಡುವ
ದಿಟ್ಟಹಕ್ಕಿ ತಕ್ಕುದನು ಗೈವೆ ನಿನಗೆ.

॥ಸಿಕ್ಕಿ ಸಿಕ್ಕಿ—

(ಹಿಡಿಯಹೋಗುವಳು. ಒಂದು ಗರಿ ಮಾತ್ರ ಕೈಗೆ ಬರುತ್ತದೆ. ಹಕ್ಕಿ ತಪ್ಪಿಸಿಕೊಂಡಿದೆ.)

ಪಕ್ಕ ಒಡಿದು ಈ ಹಕ್ಕಿ ಮೀರಳಿಯೂ ತಪ್ಪಿಸಿಕೊಂಡಿತು

ಹಂಸ

(ಹಾ ಎಂದು ಚೀತ್ಕರಿಸಿ)

ಎಷ್ಟು ಒರಟೇ ನಿನ್ನ ಕೈ, ಆತನದು ಎಷ್ಟು ಮೃದು! ಆದರೂ ಎಷ್ಟು ದೃಢ!—

ಚಕ್ಕನೆ ಹಿಡಿದೆನ್ನ
ತೆಕ್ಕೆಯೊಳು ಬಿಗಿದರು
ಚಿಕ್ಕಗರಿ ನೋಯದಂತೆ
ಅಕ್ಕರೆಯ ತೋರಿದವ
ಮಿಕ್ಕವ ನಿನಗೆ—

ದಮಯಂತಿ

ನೀನಾರ ಕೈಗೆ ಸಿಕ್ಕಿ ತಪ್ಪಿಸಿಕೊಂಡು ಬಂದೆ, ಹಂಸ?

ಹಂಸ

ಆ ಪುರುಷಸಿಂಹನ ಕೈಗೆ ಸಿಕ್ಕಿಬಿದ್ದು ತಪ್ಪಿಸಿಕೊಳ್ಳುವವರಾರು? ಆತನೇ ಕನಿಕರಿಸಿ ಕೈ ಬಿಟ್ಟ. ಆದರಿಂದ ಬದುಕಿ ಬಂದೆ. ಆಹಾ, ಆತನ ಔದಾರ್ಯ ವನ್ನು ಎಷ್ಟೆಂದು ಹೊಗಳೋಣ! ಆ ರೂಪವೋ, ಆ ಗುಣವೋ, ಆ ಕೌಶಲವೋ!

ಪಟ್ಟಿನೊಳು ಹಿಡಿದರು
ಪೆಟ್ಟಾಗದಂದದಿ
ಕಟ್ಟಿ ನನ್ನ, ಧೀರ ಕೈ-
ಬಿಟ್ಟ ಮೊರೆಯ—

ದಮಯಂತಿ

ರಾಜಹಂಸ, ನೀನಾರ ಕೈಗೆ ಸಿಕ್ಕಿದ್ದೆಯೇ? ಹೇಗೆ, ಎಲ್ಲಿ?

ಹಂಸ

ಚೆಂದುಳ್ಳ ಹೆಣ್ಣೆ, ಆತನ ಉದ್ಯಾನವನದಲ್ಲಿನ ಕಮಲವನದಲ್ಲಿ ಪಯಣ ದಾಯಸವನ್ನು ತೀರಿಸಲೆಂದು ಬಳಗದೊಡನೆ ತಂಗಿದ್ದಾಗ ಆತನ ಕೈಗೆ ಸಿಕ್ಕಿಬಿದ್ದೆ. ಆತನನ್ನು ಕಂಡ ಹೊರತು ಅಂಥವನಿದ್ದಾನೆಂಬುದನ್ನು ತಿಳಿಯು ವುದು ಕಷ್ಟ, ದೊರೆಕುಮಾರಿ.

ದಮಯಂತಿ

ಏನಂದೆ, ಹಂಸ?

ಹಂಸ

(ಹಾಡು—೧೦)

ಕಂಡೆ ಕಮಲಮುಖಿ,
ಇನಸಮತೇಜನ—॥ಪ॥
ದಿಟ್ಟಿ ಮುಟ್ಟಲೆದೆ ತಟ್ಟನೆ ತೆರೆವ॥ಅನುಪ.॥

ಕಾಂಬರ ಕಂಗಳ ತುಂಬಿ ನಿಲ್ಲುವನ
ದುಂಡುಮೊಗದ ಕಡುಚೆಲುವನನು
ಗೆರೆಯ ಕೂರಲವನ ನಿಡಿದು ತೋಳವನ
ಬೆಂಗಾವಲೋ ಎನೆ ಚೆಂಗೈಯವನ
॥ಕಂಡೆ ಕಮಲಮುಖಿ—

ಬಾನೆಮೆ ಕವಿದಿಹ ಕಡಲ ಕಣ್ಣವನ
ನೋಟದಿ ನಲ್ಕಳಿ ಹೊಳೆಸುವನ
ಎಲ್ಲರ ಹದುಳಕು ಇಲ್ಲಾಸರೆ ಎನೆ
ಬಿತ್ತರದೆದೆಯ ಎತ್ತರದಾಳನು
॥ಕಂಡೆ ಕಮಲಮುಖಿ—

ಹರಳಿನ ಬಿಗುಪನು ಹೂವಿನ ಮೆಲುಪನು
ಒಂದೆ ಹಿಡಿಯೊಳೇ ಹಿಡಿದವನ
ಶಕ್ತಿ ಪುಷ್ಟಿ ಸೌಷ್ಠವ ಸರ್ವಾಂಗದಿ
ಕಟ್ಟುವಡೆದ ಮೈಕಟ್ಟಿನವನು
॥ಕಂಡೆ ಕಮಲಮುಖಿ—

ಹುಲಿಯೊಳು ಹಿಡಿದೆನ್ನೆರಳೆಕಂಗಳಿಂ
ನೋಡಿ ಕೊರಲ ನೇವರಿಸಿದನ
ಜಗದೊಳು ನಿನಗೆಣೆ ಗಂಡಿಲ್ಲವು ಎನೆ
ಹೆಣ್ಣೊಳಿಹರೆ ಎಂದರೆನಗೆ ನಕ್ಕನ
॥ಕಂಡೆ ಕಮಲಮುಖಿ—

ತನ್ನ ಕನಸಿಗೇ ತಾ ಮರುಳಾಗುತ
ಮರವಿನೊಳೆಲ್ಲವ ನೋಡುವನ
ಒಳನಲವಿನ ನಗೆವೆಳಗನು ಚೆಲ್ಲುತ್ತ
ಕೊನೆಬೆರಳನು ಮೊನೆಮೀಸೆಗೆಳೆವನ
ಕಂಡೆಕಮಲಮುಖಿ ಇನಸಮತೇಜನ
ತುಂಬುಗಣ್ಣೊಳರಳಂಬನೆಸೆವನ
ಕಂಡೆ ಕಮಲಮುಖಿ

ಎದೆಯಗಲದೊಳೇ ಬಗೆಯ ಹಿಡಿವನ
ಕಂಡೆ ಕಮಲಮುಖಿ

ಬಗೆಯು ಲಹರಿಯೊಳು ಜಗವ ತೂರುವನ
ಕಂಡೆ ಕಮಲಮುಖಿ

ಕಂಡ ಕಣಸಿನೊಳು ಕಾಂಬುದನೊಲ್ಲದನ
ಕಂಡೆ ಕಮಲಮುಖಿ

ತನ್ನಂಥವನಿನ್ನೊಬ್ಬನಿಲ್ಲದವನ
ಚೆಂದುಳ್ಳವಳೇ ನಿನಗೆ ತಕ್ಕವನ
ಕಂಡೆ ಕಮಲಮುಖಿ

ಇನಸಮತೇಜನ

ದಿಟ್ಟ ಮುಟ್ಟೆ ಎದೆ ತೊಟ್ಟನೆ ಬಿರಿವ—
ಕಂಡೆ ಕಮಲಮುಖಿ—

## ದಮಯಂತಿ

(ಹಾಡು—೧೧)

ಓ ಮರಾಳ, ನೀನೀಪರಿ ಸಲ್ಲುನುಡಿವ ಪುರುಷ
ಅವನಾರೇ, ಎಲ್ಲಿಹನೇ ? ನಿನ್ನಾಲಿಪುದೇ ಹರುಷ—
ಎಲೆ ಮೋಡಿಯ ಬಾನಾಡಿ, ಮರಳಿಯು ಪೇಳೆನಗೆ
ನಿನಗೇಪರಿ ಸಂಗಡಿಸಿತು ಆತನ ಸ್ಪರುಶ ?
॥ಓ ಮರಾಳ—

## ಹಂಸ

ದೊರೆಕುವರಿ, ನಿನಗೆಂದೇ ಬಿದಿ ಸೃಜಿಸಿಹ ಪುರುಷ
ಆ ಹೆಮ್ಮಲೆಯಂಚಿನ ಬಾನಾಚೆಯ ನಾಡಿನ ಹರುಷ
ಕನ್ನೈದಿಲೆ ಚೆಂದಾವರೆ ಬೆಳ್ನೈದಿಲ ಕೆರೆಯ
ಸನಿಯದಿ ಮೈಮರೆತಿರಲೆನಗಾಯಿತವನ ಸ್ಪರುಶ

## ದಮಯಂತಿ

ಮಲೆನೀಲದಿ ದಿವದ ನೀಲ ಬೆರೆದಿರುವೆಡೆಯಲ್ಲೇ
ಅವನಿರುವುದು—ಬೆರೆದಿರುವೆಡೆಯಲ್ಲೇ ?
ಎಲ್ಲೆಡೆಯಿರುವಾ ನೆಲಕಾವುದೆ ಎಲ್ಲೆ ?
ಎಲೆ ಹಂಸ,
ಸವಿನುಡಿಯೊಳೆ ನನ್ನ ಹದುಳ ಕೆಡುವೊಲುಗೈದೆ
ನಾನೊಲಿದೀ ನಾನೇ ನನ್ನಿಂ ಜಗುಳುವವೋಲಾದೆ.

## ಹಂಸ

ದಮಯಂತಿಯು ದಮಿಸಿ ಮನದಿ ನಳನಳಿಸುವ ನಳನ
ಆವೆಡೆಯವನೆಂಬೆನೆ ನಾ, ಎಂದೋ ನಿಮ್ಮಿಯ ಮಿಳನ—
ಅದುತನಕೀ ಮೈಮುಟ್ಟುತ ಕೊಳ್ಳು ಸೋಂಕ ನೀನವನ
ನಾಡರಿಯೆ, ಜಾಡರಿಯೆ; ನನಗಿನ್ನಾ ಮಾನಸದೆಡೆ ಪಯಣ,

ದಮಯಂತಿ

(ಕೈಗೆ ಬಂದ ಹಂಸವನ್ನು ಅಪ್ಪಿಕೊಂಡು)

(ರಾಗ—ನೀಲಾಂಬರಿ)

(ವೃತ್ತ) ಬಿಗಿಮೈಯ ಮೆದುಗರಿಯ ಬೆಳ್ಳಬಿಳಿಯುರಸಂಚೆ
ನಿನ್ನ ಪದ ಚೆಂಚು
ಮೊದಲೊಲುಮೆ ಬಗೆಯೊಳಗೆ ಬಸಿದು ಮೈದೋರ್ವುದೋ
ಎನಲಾಯಿತ್ತು ಕೆಂಚು
ಈ ಕೊಕ್ಕ ನೋಡಿ ನಾ ಕಂಡುದನು ನೀನೊರ್ವಳೇ
ಕೊಂಡೊಯ್ವೆ ಎಂಬೆ
ತೆರವ ಗೈದೆನ್ನಿರವ ಕಂಡರಿಯುದೇತರದೊ
ಹಂಬಲೊಳು ತುಂಬೆ.

ಹಂಸ

ಸುಯ್ಯಲವನತ್ತಡೆ, ಇತ್ತೆಡೆ ಸುಯ್ಯುತಿರು ನೀನು,
ಹಸೆಗೆ ನಿಲಿಸುತ ನಿಮ್ಮ ಸುಪ್ಪಿ ಎನುವಂದಿದುವೆ ಜೇನು—

(ರೆಕ್ಕೆ ಬಡಿದು ಮೇಲಕ್ಕೆ ಹಾರಿ)

(ಹಾಡು—೧೨)

ಹೋ ಹೋ ಹೊಹೋ ಹೊಹೋ ಹೋ ಹೊ ಹೋ!

ಹಂಸಗಳು

(ದೂರದಲ್ಲಿ)

ಹೋ ಹೋ ಹೊಹೋ ಹೊಹೋ ಹೊಹೋ!

ಹಂಸ

ಬಂದೆ ಬಂದೆ ಬಂದೆನಿಗೋ ಬಳಗವೇ;
ಹಾರಿ, ಹಾರಿ
ಹೆಣ್ಣಿನ ಚಿಗುರುಕೈಗಳಿಂ ಜಾರಿ

ನುಡಿ ನುಡಿದು ಕಣಸ ತೋರಿ
ಎದೆಗೊಲುಮೆ ಕಿಡಿಯ ತೂರಿ
ಬಂದೆ.ಹಾರಿ, ಬಂದೆ ಹಾರಿ, ಬಂದೆ ಹಾರಿ
ಬಂದೆ ಬಳಗವನು ಸಾರಿ
ಮುಂದೆ ಎತ್ತ ದಾರಿ ?
ಎತ್ತ ದಾರಿ, ಎತ್ತ ದಾರಿ ?

ಹಂಸಗಳು

ಎತ್ತ ದಾರಿ, ಎತ್ತ ದಾರಿ ?

ಒಂದೊಂದು

ಎಲರೊಳು ಸರಿಕೆ
ಹಿಮಗಿರಿ ಸರಕೆ
ಹೊನ್ನ ಬಣ್ಣದ ಕಮಲದ ಬಸಕೆ
ಮೇಲಿನ ನೀಲದೊಳೇರಿಕೆ
ಗಾಳಿಬೀಣೆ ಗರಿಸಾರಿಕೆ
ಮಾನಸವಲ ನಮ್ಮ ಕೋರಿಕೆ
ಓಹೋ ಒಹೋ ಒಹೋ ಒಹೋ !

ಹಂಸ

ಭೈಮೀ,

ಹಂಸಗಳು

ಭೈಮೀ
ನಿನಗಿದೋ ನಮ್ಮ ಹರಕೆ
ಆಗಲಿ ಆಗಲಿ ಆಗಲಿ
ನಿನಗೆ ಬೇಗ ನಳನೊಳು ಸಂಗಡಿಕೆ.

ಹಂಸ

ಭೈಮೀನಳ

ಹಂಸಗಳು

ಭೈಮೀನಳ, ಭೈಮೀನಳ
ಎಂಬ ಮನಸದ ಮಂಗಳಕೆ
ಸಲುವೆವಿನ್ನು ಬಾನಿನ ಅಂಗಳಕೆ
ಓಹೋ. ಒಹೋ ಒಹೋ ಒಹೋ !

ಭರತವಾಕ್ಯ

(ರಾಗ—ಸುರುಟಿ)

(ವೃತ್ತ) ಕವಿಮನದ ಸರದೊಳಗೆ ಗಳಿಗೆ ನಿಲ್ಲುತ ನಮ್ಮ
ಕಲೆಯ ಕೊಡಿಗೆಯನಿಂತು ಕೊಂಡಂಚೆಯುಲಿವು
ಈ ಕತೆಗೆ ಆದರದಿ ಮನವಿತ್ತ ರಸಿಕರಿಗೆ
ತರಲಿ ಸಿರಿಸರಸತಿಯರೊಲವನನುದಿನವು.

# ಹಂಸದಮಯಂತಿ

## (ಹಾಡುಗಳ ಸ್ವರಪ್ರಸ್ತಾರ)

### ೧. ವ್ಯಥೆಗಳ ಕಳೆಯುವ ಕತೆಗಾರ

ರಾಗ–ಕೇದಾರ]  ಆದಿತಾಳ

‖ೕಗಮಾಪಮಾ ।ಗಾಮ ಗ ಗ ರಿ ರಿ ಸ। ೕೕಸಸಾಸಾೕ। ಸಾರಿಸನಿಪಪಾ‖
‖ವ್ಯ ಥೆ ಗ ಳ ಕ ಳೆ - ಯು - ವ - । - ಕ ತೆ ಗಾ -। ರ - - - - - ‖

‖ೕ ಸಾ ಸ । ರೀರಿ ಸ ಸಾ । ರೀ ರಿ ಸ ಸಾ ಸಾ । ರಿ ೕ ೕ ಸ ಸಾ ‖
‖ ನಿ ನ್ನ । ಕ ಲೆ - ಗೆ । ಯಾ - - ವು ದು। ಭಾ - - ರ - ‖

‖ವ್ಯಥೆಗಳ। ಕಳೆಯುವ। ಕತೆಗಾ।ರ-‖ನಿನ್ನ। ಲೆಗೆ|ಗಾಮಗಗರಿರಿಸ। ಸರೀಸಸಾ‖
|ಯಾ- ವು-ದು । ಭಾ- - ರ‖.

‖ೕಪಾೕಪಪಾ । ಸಾಸಸ ‖ ೕೕ ನಿ ರೀಸ ನೀ । ಪಾನಿಪಪಮಮಗ ‖
‖ ಯಾವುದು । ವಿಸ್ತರ । - ಯಾ- ವು ದು । ದು - - ಸ್ತ - ರ -‖

‖ೕೕ ಗಮಾನಿಪಾ । ಪಮಪಮ ಮಗಗರಿ । ಗ ರಿ ರಿ ಸ ಸಾ । ಸಾೕೕ ‖
‖- - ನಿ ನ ಗ ಲೆ ಹ - ರು - ಷ - ದ- । ಹ - ರಿ - ಕಾ । ರ- - ‖

‖ೕಗಮನಿಪಪಮ । ಮಗಗ ರಿ ರಿಸ। ೕೕ ಸಸಾ ರಿ ಸಾ । ರಿ ಸ ಸಾ ‖
‖ ಕಪಿಹಾ- - - । ರಿ - ತು- ಹೆ- । - - ಗ್ಗ ಡ ಲ ನು। ಎಂ - ಬೆ ‖

‖ೕಪಪಾಸಸಾ । ರೀರಿಸ ಸಸ । ರೀ ಸ ಸ । ರೀೕಸ ಸಾ ‖
‖ ಕ ಡ ಲ ನೆ । ಕಡೆ - ದರು । ಬೆಟ್ಟದೊ। ಳೆಂ - ಬೆ ‖

‖ೕಪಸಾ । ಸಸಸಾ । ರಿ ಸ ಸ ಸ । ನಿ ರಿಸನಿ ಪಾ ‖
‖-ನಿನ್ನೊ । ಹೆ ಯ ಹೇ। ರಾ- ಳ ವ । ತುಂ- - - -ಬೆ ‖

ॽಪಾ ॽಸ ಸಾ। ॽ ನಿ ಸ ರಿ ಸ ನಿ ಪಾ । ॽ ಗ ಮ ನಿ ಪಾ ಮ। ಮಗಾರಿ ಸಾ॥
ಸ್ಫ - ಟ್ಟಿಕ। - - ತ್ಸ - ನಿ - ಗು। ಅ ರಿ ದಂ - - । ಬೆ - - - ॥
॥ ವ್ಯಥೆಗಳ ಕಳೆಯುವ ॥

ॽಗ ಮಾ ಪ ಪಮ ।ॽಗ ಗಾॽ ರಿ । ಸ ರಿॽ ಸ ಸ ಸ । ಗ ರಿॽ ಸ ಸಾ ॥
ಒ ಲು ಮೆ ಬೇ-। - ಹಿ ಗಾ - । ಮೋ - - ಘ ಮ । ರಾ- - ಳ ॥

ಸ ಸ ಸ ಸ । ॽ ನಿ ಸ ರಿ ಸ ನಿ। ಪಾ ಪ ಪ । ಸಾ ಸಾ ॥
ಮುನಿಯುತೋॽ । - ಹಿ ಗ - ಮಾ -। ರಾಂ ಗ ನೆ । ಮೋ ಳ ॥

ಪ ಪ ಸ ಸ । ಸ ಸ ಸ ಸ । ಸ ಸ ಸಾ ಸ ನಿ । ಸ ರಿ ಸ ನಿ ಪಾ ॥
ಸು ರ ರೆ ಡೆ। ಯೊ ಳಿ ಕ ಲಿ। ಪುರು ಷ ಕ - । ರಾ - - - ಳ ॥

ॽ ಗಗಾಮ ಪಾ । ನಿಪಪಮ ಮಾ । ಪಾನಿಪಪಮಮಾ । ನಿಪಾಮಗಾ॥ ಮರಿ
- ಅ ರಿ ವ ರಾ। - - ರು - ನಿ । ನ್ನೈಂ - - - - ದ್ರ । ಜಾ - - ಲ ॥ - -
॥ ವ್ಯಥೆಗಳ ಕಳೆಯುವ ॥

ॽॽಗ ಮಾ ಪ ಮಾ । ಪನಿಪಮಂಮಗಗರಿ । ಗ ರಿॽ ಸ ಸ ಸ । ಸಾॽॽ ॥
ಮಾ - ತೊ ಳಿ । ಏ - - - ಶ್ವ - ವ - । ತೋ - - ಲಿ ಸು। ವ - - ॥

ರಿ ರಿ ಸ ಸ । ರಿ ॽ ॽ ಸ ಸ ಸ । ರಿ ॽ ॽ ಸ ಸ ಸ । ಸಾ ॽ ॽ ॥
ಮನದೊಳಿ । ವೆ - ಲ್ಲ ವ। ಜಾ - - ಲಿಸು । ವ - - - ॥

ॽಪಪಾಸಸಾ । ಸಾ ಸ ಸ । ಮಗಾರಿ ಸಾ ಸ ರಿ । ರಿಗಾಸ ಸಾ ॥
ಮಧದದೊಳ । ಗೆ ಲ್ಲ ರ । ಕೀ - - ಲಿ ಸು - । ವ - - - ॥

ಸಾ ಸಾ ಸನಿ । ಸ ರಿಸನಿ ಪ ಪ। ಗಾॽ ಮ ನಿ ಪ ಪ ಮ । ಗಾ ಗ ಮರಿॽ॥
ನಿ ನ್ನ ನ - । ದಾ - - - ರಿ ಗೆ। ಹೋ - ಲಿ ಸು - । ವ - - - - ॥
॥ ವ್ಯಥೆಗಳ ಕಳೆಯುವ ॥

## ೨. ಕರೆವುದು ಹೈಮಾಚಲರಸ

ರಾಗ—ಹಂಸಧ್ವನಿ] [ಚತುಶ್ರ ಏಕತಾಳ

ನಿ ರಿ ಸ ನಿ ಪಾಗಾ॥ ಪ ಸ ನಿ ಸಾ॥ ಪ ಪ ಪ ಪ ರೀ ರಿ ಸ॥ ರಿ॥॥॥

ಕ ರೆ ವು ದು ಹೈಮಾ- ॥ ಚ ಲ ಸ ರ ॥ ಕುವಲಯ ಬಂಧುಗ ॥ ಳೇ - - - -

ನಿ ಪ ನಿ ॥ ರಿ॥॥॥

ಬ ರು ವಿ ॥ ರಾ - -॥

ಗಾ ಪ ಪ ಗ ಪ ನಿ ಪ ॥ ಗ ಪ ಗ ಪ ಗ ಪ ನಿ ಪ ॥ ಪಾ ಪಾ ನಿ ಪ ಸ ನಿ ॥

ಮಂಜಿನ ಸೆರೆಯನು ॥ ಕ ಳಿ ದಿ ರೆ ರ ವಿ ಕ ರ ॥ ನೀ ರೋ ಟಗಳಿಗೂ ॥

ಪ ಗ ಪ ಸ ನೀ ॥ ಗ ಗ ರಿ ಗ ಗ ರಿ ಸ ಸ ॥ ಸ ಸ ರೀ ಸ ಸ ಸ ಸ ॥ ಸಾ ರಿ ಸ ಸ ಸ ಪಾ ॥

ಧುಮುಕುತಿ ವೆ ॥ ನೆಗೆದು ನೆಗೆದು ಬರ ॥ ಸೆ ಳೆ ದ ಪ್ಪು ವ ತೆ ರೆ ॥ ತೆಕ್ಕೆಯೊ ಳ ಗೆ ಸ ॥

ಗ ಪ ಸ ನಿ ಸಾ ॥ ಗ ಗ ಗ ರಿ ಗಾ ॥ ರಿ ರಿ ರಿ ಸ ರೀ ॥ ಸ ರಿ ಸ ಸ ಸ ರಿ ಸ ನಿ ॥

ಲ್ಲ ಪಿ ಸು ತಿ ವೆ ॥ ತ ಡೆಯಿರ ದೆ ॥ ದಡ ಕ ಲೆ ವ ॥ ಅಲೆಗ ಳ ಬೇ- ಸ ರ ॥

ಪ ನಿ ಪ ಗ ರೀ ॥

ಕಳೆಯುವಿರಾ ॥

ಗ ಗ ಗ ಪ ಗ ರಿ ಸ ಸ ॥ ರೀ ಗ ರಿ ಸ ಸ ಸ ಸ ॥ ಸ ರಿ ಸ ನಿ ನಿ ರಿ ಸ ನಿ ॥

ಬ ರಿ ನೀ- ಲದ ತೆಳು ॥ ನೀ ರಿ ನ ಹ ರಹಿ ನ ॥ ಬೆ ಳು ಪಿ ನ ತೆ ರ ಪನು ॥

ಪಾ ಪ ಗ ರೀ ॥

ತಂಂ ಬಂ ಪಿರಾ ॥ ॥ಕರೆವುದು ಹೈಮಾಚಲರಸ॥

ನಿ ರಿ ರಿ ನಿ ರಿ ರಿ ನಿ ಪ ॥ ನಿ ರಿ ರಿ ರಿ ನಿ ರಿ ರಿ ರಿ ॥ ನಿ ರಿ ಗ ರಿ ಸ ನಿ ಪಾ

ನೀ - ರಿ ನೆಳೆಯ ತಂ - ॥ ಬೂ - ರಿಯ ಮೀ ಟುತ ॥ ಶ್ರು ತಿ ನು ಡಿ ಸು ವ ಪಾ

ರಿ ರಿ ನಿ ಪ ನಿ ರಿ ॥

ದ ಗ ಳಿ - ಲ್ಲಿ - ॥

| ಗ ಗ ರಿ ಸ ರಿ ಗ ರಿ ರಿ | ೀ ರಿ ಗ ರಿ ಸ ಸ ಸ | ಪ ನಿ ರಿ ಗ ರಿ ನಿ ನಿ ನಿ | ಪ ನಿ ರೀ ಸಾ
| ಕೊರಳಳಬಳುಕಿನೊಳ | ತಾ ಳ ವ ನಂ- ಕಿ ಸಿ | ನ ಡೆಯುತೋ-ರ್ವಬಿನ | ದಿ ಗ ಳೆ ಲ್ಲಿ

| ಗಾ ಗ ಗ ಗ ಗ ಗ ರಿ | ಗಾ ರೀ ರಿ ರಿ | ನಿ ಪ ನಿ ರೀ | ಗ ಗ ಗ ಪ ಗ ರಿ ಸ ಸ |
| ಚಂಚ ಲ ಜ ಲ ದ - | ಲ್ಲಿ ಬಿಂಬವ | ಚೆ - ಲ್ಲಿ | ಎದೆಯೊಳ ಗಣ ಬ ರಿ |

| ಸ ಗ ರಿ ಸ ಗ ರಿ ಸ ನಿ | ಪ ಗ ರಿ ನಿ ಗ ರಿ ಸ ನಿ | ಪ ಗ ರೀ ನಿ ರಿ ನಿ ಪ | ಪ ಗ ರಿ ರಿ
| ಮೂ-ಕ ಭಾ- ವ ಗ ಳ | ರೇ -ಪೆ ಗೊಳುವ ಪ ರಿ | ನೆ ರ ಳಿಂ ದೇ-ಳು ತ | ತೇ-ಲುವ

ನಿ ರಿ ನಿ ಪ | ಪಾ ರೀ ||
ಚಂ-ದ್ರಿ | ರೆ ಲ್ಲಿ || ॥ ಕರೆವುದು ಪೈಮಾಚಲಸರ ॥

| ಸ ರಿ ಸ ಸ ರಿ ಸ ನಿ ಪ | ಪ ನಿ ಪ ಪ ನಿ ಪ ಪ ಗ | ಗ ಪ ಗ ಗ ಪ ಗ ಗ ರಿ | ರಿ ಸ ಸಾ ೀ ೀ |
| ಹಾ-ರಿಹಾ-ರಿ ನಾ- | ಪೂ- ರ ನೂ- ರ ಕ ಳ | ದೇ- ರಿ ಯೋ ರಿ ನಭ | ಕೆ- - - - |

| ಪಾ ಪ ಪಾ ನಿ ಗಾ | ಗ ಪ ಪ ಪಾ ನಿ ಗಾ | ಗ ಪ ಪ ಪಾ ಪ ಗ ರಿ | ರಿ ಸ ಸಾ ೀ ೀ ಗಾ |
| ದೂ ರ ದೂರ ಕಾ | ಸಾ- ರ ತೀ ರಕೋ | ಗುಡುತ ಸೇರು ವುದ | ಕೆ- - - ನೀ |

| ಗ ಪ ಗ ರಿ ಸಾ ರಿ ಗ | ರಿ ಸ ಪಾ ಗ ರಿ ಸ ನಿ | ಪ ಪ ಪಾ ರೀ
| ಳ್ಕೊ ರ ಲೊ ಳು ಗಾಳಿಯು | ಕೊ ರೆ ದಾ ಗ ಸ ದೊ ಳು | ಬ ಳಿ ಮಾ ಡಿ

| ಗಾ ಗ ಪ ಗ ರಿ ರಿ ಸ |
| ನೀ ಲಾಂ ಬ ರ ಕಾ - |

| ಗ ರಿ ಸಾ ಪ ರಿ ಸಾ | ನಿ ಪ ಪ ಪ ಪಾ ರೀ | ೀ ೀ ಗಾ ಗ ಗ |
| ಗ ಲು ಜಾ ಲಿ ಯ ಹೂ | ಮಾ - ಲೆ ಯಂ ವೋ ಡಿ | ಉ ತ್ತ ರ |

| ಗಾ ಪ ಗ ಗಾ ರಿ ಸ |
| ದು ತ್ತ ರ ದ ತ್ತ ಣ |

|ನಿ ನಿ ರೀ ಸ ನಿ ನಿ ರಿ|ಸ ನಿ ಪಾ ಪ ಗ ರಿ ರಿ|ನೀ ೯ ರಿ ರಿ ಸ ನಿ ಪಾ|
|ನಗದೊ ತ್ತಡ ದೊಳ|ಗಿ ರುವ ಸು ಮ ನ ಸ|ರೆ ತ್ತ ಲು ನೆ ರೆ ವ|

|ನೀ ರಿ ರಿ ನೀ ರಿ ರಿ|
|ಕಿ ನ್ನ ರಿ ಕಿ ನ್ನ ರ|

|ಸ ನಿ ಪಾ ಸ ರಿ ಸ ನಿ|ಪಾ ರೀ ೯ ೯ ಸ ರಿ|ಸ ನಿ ಪಾ ರೀ
|ರೊ ಲಿ ವ ಸ ರೆ ದೆ ಡೆ|ಗೋವೋ ಸಾ -|ರುವೆ ವೋ ವೋ

॥ ಕರೆವುದು ॥

||ಗ ಗ ಗ ಪಾ ಪ ಪ ಪ|ನೀ ರಿ ನೀ ಪ ಪ ಗ|ಪ ಪ ನಿ ಪಾ ಗ ಗ ರಿ|
||ಬ ಡಿ ವ ರೆ ಕ್ಕ ಗ ಳ|ಅ ಕ್ಕ ಪ ಕ್ಕ ದೊಳು|ನಿ ಡಿ ದು ಸುಯ್ಯು ತಿ ದೆ|

ರೀ ರಿ ಸಸಾ||
ಗಾ ಳಿ - -||

|ಪಾ ಪ ಪ ಸ ಸ ಸ ಸ|ಗ ರಿ ರಿ ಸ ಸಾ ೯ ೯|ಪ ಪ ಗ ಗ ಪ ಪ ಪ ಗ
|ಇ ವ್ಮ ಡಿ ಸಿ ತ ದ ರ|ದಾ - ಳಿ - - - -|ತ ಲ ದ ಕ ಮ ಲ ವ ನ

|ಗ ಪ ಪ ಗ ಪ ನಿ ನಿ ಸ|
|ದ ಣಿ ವ ಕೆ ರ ಳಿ ಸಿ ದೆ|

|ಗ ಪ ಪ ಗ ಪ ಪ ಗ ರಿ|ರಿ ಸ ಸಾ ೯ ೯ ಪ ಪ|ನೀ ನಿ ನೀ ನಿ ಪಾ|
|ಬಿ ಡು ವಿ ನೆ ಡೆ ಯ ತೋ|ರಿ - - - - ಬ ಗೆ|ಹೋಹುದ ತ್ತ ಜಾ|

|ನಿ ೯ ೯ ೯|ಸಾ ರಿ ಗಾ ರಿ|
|ರಿ|ಹೋ ಹೋ - -|

|ರಿ ರಿ ಸ ಗ ರಿ ಸಾಸ|ಗ ರಿ ರಿ ಸ ಸಾ ೯ ೯|
|ಬಗೆ ಹೋ-ಹು ದ ತ್ತ|ಜಾ- ರಿ - - -|

| ಗ ಪ ಪ ಗಾ ಪ ಪ ಪ | ಗ ಪ ಪ ಗಾ ಪ ಪ ಪ | ಗ ಪ ಪ ಗ ಪ ಪ ಗ ಪ |
| ತ ಡಿ ಯ ಹೆ ಮ್ಮ ರ ದ | ನೆ ರ ಳ ದೋ ಲಿ ಸು ತ | ಬ ಳಿ ಗೆ ಬ ರು ವ ತೆ ರೆ |

| ನಿ ೯ ೯ ೯ | ಗ ಗ ಗ ಪ ಗ ಗ ರೀ |
| ಯ | ಕ ರ ದೊ ಳಾಂ-ತು ನೀ |

| ರೀ ರಿ ಸ ಗ ರಿ ಸಾ | ಸಾ ನಿ ನೀ ನಿ ನಿ ನಿ | ಗ ರಿ ರಿ ಸ ಸಾ ೯ ೯ |
| ನೆ ನ್ನ ರ ತು ನ ಪೇ | ಎಂ ಬ ತಾ ವ ರೆ ಯ: | ಮರೆ ಯ - - - |

| ಗಾ ಗ ಗ ಗ ಗ ಗ ರಿ | ಗಾ ರೀ |
| ಸೇ ರಿ ದ ಣಿ ವ ಕ ಳೆ | ದು ನ |

ರೀ ಗ ರಿ ರಿ ರೀ ನಿ | ಪ ನಿ ರೀ ೯ | ಗಾ ಪ ಗ ಗ ರಿ ರಿ ರಿ |
ಪ್ರಾ ಯಾಸ ವ ನಿ ದ್ದ | ಗ ರೆ ದು | ನಾ ಳೆ ಪಯಣ ಕನು |

| ಸಾ ರಿ ಸಾ ನಿ ಪಾ | ರೀ ರಿ ಸಾ ನಿ ಪ ಪ |
| ವ ಪ್ಪ ಬ ನ್ನಿ ರೇ | ಇಂದು ತೋಪಿ ಗಿ ಳಿ |

| ಸಾ ೯ ೯ | ಪಾ ನೀ ನಿ ನಿ ನಿ ನಿ | ಪಾ ನೀ ನಿ ನಿ ನಿ ನಿ | ಪಾ ನೀ ನಿ ನಿ ನಿ ನಿ |
| ದಂ | ಇಂ ದಿ ಲ್ಲಿ ಬಿಡುವು | ಮುಂದ ಕ್ಕೆ ಪಯಣ | ಎಂದೆಂಬ ಬ ನ ದ |

| ನಿ ಪ ನೀ ೯ |
| ಕ ರೆ ಯ |

| ಗಾ ಗ ಗ ರಿ ಗಾ ಗ | ರೀ ಗ ರಿ ನಿ ರೀ ರಿ | ನೀ ರಿ ರಿ ರಿ ನೀ ನಿ |
| ಮ ನ್ನಿ ಸು ತ ಈ ಗ | ಭಾ ವಿ ಸ: ವ ಹೂವ | ಹೊಂಗನಸ ನಾಂತ |

| ಪ ರಿ ರಿ ಸ ಸಾ ೯ ೯ ||
| ಕೆ ರೆ ಯ - - - ||

## ೩. ಮನದ ತೆರವನರಿವರಾರು

ರಾಗ—ಕೀರವಾಣಿ] [ತಾಳ ರೂಪಕ

॥ ೯ ಪ ದ । ಪ ಮ ಮ ಮ ಗ ॥ ಮ ಗ ಮ ಪ । ಪ ಮ ಗ ರಿ ಸ ॥
॥ ಮ ನ । ದ ತೆ ರ ವ - ॥ ನ - ರಿ - । ವ - ರಾ - ರು ॥

॥ ೯ ನಿ ಸ । ೯ ರಿ ರೀ ಗ ಗ ॥ ೯ ಮ । ಪಾ ೯೯ ॥
॥ - ಕ ನ । - ಸಿ ನ ನೆ ಲೆ ॥ - ಅ । ದಂ - ॥

॥ ೯ ಪ ದ । ೯ ನಿ ಸಾ ರೀ ॥ ೯ ರಿ ಗ । ೯ ರಿ ಸ ನಿ ನಿ ದ ದಾ ॥
॥ ಬಯ । ಸಿ ದ ರೊ ॥ ಬಯ । - ಕೆಯ - ರಿ - ಯ ॥

೯ ದ ನಿ । ೯ ರಿ ನಿ ರಿ ನೀ ನಿ ದ ॥
- ದ ರ । - ಕೆ ಯೊಂ - ದ - ॥

॥ ಮ ಗ ಮ ಪ । ಪ ಮ ಗ ರಿ ಸ ॥
॥ ನ - ರಿ - । ಯು - ವಂ - ಥ ॥ ॥ ಮನದ ತೆರೆವ ॥

॥ ಪಾ ೯ ದ । ಪ ಮ ಮ ಮ ॥ ಮ ಗಾ ಮ । ಪಾ ಮಾ ೯ ಗ ರೀ ॥
॥ ಕ ೦ ಗ । ಳ ಸೆ ರ ಗ ॥ ಹಿ ಡಿ ದೆ । ಳೆ ವಂ ದ ದ ॥

ಸ ಸಾ ರಿ । ರೀ ರೀ ರಿ ಸ ರೀ ॥
ಚೆ ಲು ವಿ । ನ ಇ ವು - ಅ ॥

॥ ಗ ಮ । ಪಾ ೯ ೯ ॥ ೯ ಪ । ದ ನಿ ಸ ರಿ ॥ ರಿ ಗ । ೯ ರೀ ಸ ॥
॥ ವು ಗ । ಳ - - ॥ - ಅ । ಲ್ಲ ಗ ಳೆ ದು ॥ ಎಲ್ಲ । - ಇ ೦ ಪ ॥

೯ ದ ನಿ । ನಿ ರಿ ರಿ ಗ ರೀ ನಿ ದ ॥
- ನೊ - । ಲ್ಲ ದೆ - - ಲ್ಲೊ - ॥

ಮಂ ಗ ಮ ಪ । ಪ ಮ ಗ ರಿ ಸ ॥
ಅ - ಲೆ - । ಯು- ಎಂ - ಥ ॥ ॥ ಮನದ ತೆರವ ॥

ಪಾ । ದ ಪ ಪ ಮ ಮ ಮಂ ॥ ೯ ಮ ಗ । ಪ ಮಂ ಮ ಗ ಗ ಗ ॥
ತುಂ । ಬಿ - ಬ - ರು ವ ॥ - ಹ ರ । ಣ - ಕಿ - ಳೆಯ ॥
ಮ ಗ ಪ ಮ । ಮ ಮ ಗ ರಿ ಸಾ ॥
ತುಂ - ಬಿ - । ನಿಂ - - - ಬೆ ॥

ರಿ ಗ । ಮ ಪಾ ೯ ॥ ೯ ನಿ ದ । ನಿ ಸ ರಿ ರಿ ॥ ಸ ರಿ ಗ ಮ । ೯ ೯
ತ - । ಪ್ಪಿ ತೋ ೯ ॥ - ಎಂ - । ಬ ಪರಿಯೊ ॥ ಳಾ - - - । - -
ಗಾ ೯ ರಿ ಸಾ ॥
ಲ ಂ ಬ ನ ॥

೯ ದ ನಿ । ೯ ರಿ ನೀ ದಾ ॥ ಮ ಗ ಮ ಪ । ಪ ಮ ಗ ರಿ ಸ ॥
ಕಾ - । - ವು ದ ನೂ ॥ ಕಾ - - - । ಣ - ದ ಲಿ ವ ॥
॥ ಮನದ ತೆರವ ।—

ಪ ಪಾ ಪ । ಪ ಮ ಗ ಮ ॥ ಗಾ ೯ ಪ । ಮಂ ಗ ರಿ ಗ ॥
ಬೆ ಳ ಕಿ । ನ ಹಿ - ಗ್ಗು ॥ ಬ ಣ್ಣ । ದ ಹಿ - ಗ್ಗು ॥
ರೀ ೯ ಗ । ರಿ ೯ ರಿ ಸ ಸಾ ಸ ನಿ ॥
ಕ ಂ ಪಿ । ನ ಹಿ - - ಗ್ಗು - ॥

ರಿ ಗ । ಮ ಪಾ ೯ ॥ ದಾ ೯ ದ । ದಾ ನೀ ೯ ರಿ ರೀ ॥ ರಿ ರೀ ಗ ।
ಸಿ ರಿ । ಗ ಳ ॥ ಸು ಗ್ಗಿ । ಯ ವೆ ಗ್ಗ ಳ ॥ ದಿ ರ ವಿ ।
ರೀ ಸಾ ೯ ಸ ಸಾ ॥
ನ ಹಿ ಗ್ಗಿ ಗೆ ॥

‖ದ ನಿ ನಿ ರಿ । ೯ ನಿ ದ ಪ ‖ ಮ ಗ ಮ ಪ । ಪ ಮ ಗ ರಿ ಸ ‖
‖ಓ - ದೇ - । - ಯಿ ರ ವು ‖ ಸಾ - - - । ಲ - ದೆಂ - ಬ ‖

‖ ಮನದ ತೆರವ ‖—

(ಮಿಕ್ಕ ಚರಣಗಳು ಮೇಲಿನಸದರಂತೆ)

## ೪. ನಿಂದೆಡೆಯನು ತುಂಬುವ ಸುಂದರನೇ

ರಾಗ: ಋಷಭವಿಲಾಸ] ಸ ರಿ₂ ಮ₁ ಪ ದ₁ ಸ । ಸ ದ₁ ಪ ಮ₁ ರಿ₂ ಮ₁ ರಿ₁ ಸ [ಚತುಶ್ರ ಏಕತಾಳ

‖ಪಾ ದ ಪ ಪ ಮ ರೀ । ರಿ ಮ ಪ ಮ ಪ ಮ ರೀ । ಪ ಮ ರಿ ರಿ
‖ನಿಂದೆ . ಡೆ ಯನುತಂ । ಬು ವ ಸುಂ - ದ ರ ನೇ । ಕ ಂ - ಡಿ ಹೆ

ರಿ₁ ರಿ₁ ರಿ₁ ರಿ₁ । ಮ ರಿ₁ ಸ ಸ ಸಾ ।
ನಿ ನ ಗೆ ಣೆ । ಯಾ- ಕಿ ಯ ನು ।

‖ಪಾ ದ ದ ಸಾ ಸ ಸ । ರೀ ರಿ ರಿ ಮ ರಿ₁ ರಿ₁ ಸ । ಪ ದ ಪ
‖ಸಂದೆಗ ವಿ ಲ್ಲ ವು । ರಾ ಜ ಕು ವ ರ ನಿ - । ನ್ನ ರ ವಿ

ಮ ಪ ಮ ರೀ । ರಿ ಮ ಮ ಪ ದ ಪ ಪ ಮ ।
ನ ರ ಕೆ ಪೂ । ರೈ - ಕೆ ಯ ನು - - - ।

|ರೀ ರೀ ಪ ಮ । ಪ ಮ ರಿ ರಿ ಮ ರಿ₁ ರಿ₁ ಸ । ಸಾ ೯ ೯ ‖
|- ಕ ಂ ಡಿ ಹೆ । ನಿ ನ ಗೆ ಣೆ ಯಾ-ಕಿ ಯ । ನು - - ‖

‖ಪ ಪ ದ ಪ ಮ ಮ ರಿ ರಿ । ರಿ ಮ ಮ ಪ ಪ ಮ ಮ ರಿ ।
‖ಕ ಳೆ ಮೊ ಗ ದೊ ಳು ಬೆ ಳ । ಕಾ - ಡು ವ ಕ - ಣ್ಣೊ ಳು ।

ಮಾ ಮ ರಿ ರಿ ಮ ಮ ರಿ ।
ಚೆ ಂ ದು ಟಿ ಯೊ ಳ ನ ಗೆ ।

ಮ ರಿ$_1$ ರಿ$_1$ ಸ ಸಾ । ಪಾ ಪ ಪ ದ ದ ಸ ಸ । ರೀ ಮ ರಿ ರಿ$_1$ ರಿ$_1$ ಸ ಸ ।
ಹೊ ಳ ಹಿ ನೊ ಳು । ಕೆ ನ್ನೆ ಯ ಕು ಳಿ ಯೊ ಳು । ಗ ಲ್ಲ ದ ಸು ಳಿ ಯೊ ಳು ।

ಸಾ ಸಾ ಪಾ ದ ಪ । ಮ ಪ ಪ ಪ ಮ ರಿ ರಿ ರಿ । ರಿ ಪ ಪ ಮ
ಹ್ರೀಶ್ರೀ ಕೀ ರ್ತಿ ಗ । ಳಿ ಸೆ ವ ಚಿ - ನ್ನ ಯ ನು । ಕಂ-ಡಿ ಹೆ
ರಿ ಮ ರಿ ರಿ । ಮ ರಿ$_1$ ರಿ$_1$ ಸ ಸಾ ॥
ನಿ ನ ಗೆ ಣೆ । ಯಾ - ಕೆ ಯ ನು ॥

ಮಾ ಪ ಪ ದ ಪ ಪ ಮ । ರಿ ಮ ಮ ಪ ಪ ಮ ರಿ ರಿ । ರಿ ಮ ಮ ರಿ
ಪ ಚ್ಚೆ ಮು - ತ್ತು ಹ ರ । ಳೋ - ಲೆ ಕ ಪೋ - ಲ ಕೆ । ಕಾಂ - ತಿ ಯ
ರಿ ಮ ಮ ರಿ ।
ಕಂ - ದ ಲಿ ।

ರಿ ಮ ಪ ದ ಪಾ । ಪ ಪ ಪ ದ ಸ ಸ ಸ ಸ । ರಿ ರಿ ಮ ರಿ$_1$ ರಿ$_1$ ರಿ$_1$ ಸ ಸ ।
ಕೆ ಯ ರ ಚಿ ಸೆ । ಕೊ ರ ಲ ಬ- ಣ್ಣ ವ ನು । ಮ ಣಿ ಸ ರ ಮು ಡು ಗೊ ಂ- ।
ಸಾ ಸ ಸ ಸ ಸ ಪಾ । ಪ ದ ಪ ಮ ಮ ಪ ಮ ರಿ । ರಿ ಪ ಪ ಮ
ಡು ಬ್ಬಿ ನೆ ದಯಕೊಂ । ಡಾ - ಟ ದೊ ಳ ಲು ಗು ವ । ಕಂ - ಡಿ ಹೆ
ರಿ ಮ ರಿ ರಿ ।
ನಿ ನ ಗೆ ಣೆ ।

ಮಃ ರಿ$_1$ ರಿ$_1$ ಸ ಸಾ ॥
ಯಾ - ಕೆ ಯ ನು ॥

।ನೋಡಿನೋಡಿ ನಾ ಮಚ್ಚರಿಸುವ ನಡೆ
।ಹಕ್ಕಿಯಿಂಚರವ ಜರೆವ ನುಡಿ
।ರೆಕ್ಕೆಗೊಳದೆ ಮೇಲೆಲರಿನೊಳಾಡುವ
।ಹರುಷದ ಹಗುರಿನ ಲಗುಬಗೆಯುವಳನು ॥ ॥ ಕಂಡಿಹೆ ॥

(' ಪಚ್ಚೆ ಮುತ್ತು ' ಎಂಬಂತೆ)

ಪಾ ಪ ಪ ಪಾ ದ ಪ । ಮಃ ಪ ಮ ಮ ರಿ ಮ ರಿ ರಿ । ರಿಮಮರಿ
ಹಾ ಸ ವಿ ಲಾ ಸ ದಿ । ಒ - ಳ್ನು ಡಿ ನ ಡೆ ಯೊ ಳು । ಸ ಹಜವಿ

ರಿ ಮ ಮ ರಿ । ರಿ ಮ ಪ ದ ಪಾ ।
ನ ಯ ಸ ರ । ಳ ತೆ ಯೊ ಳ ಗೆ ।

ಪ ಪ ದ ದ ಸ ಸ ಸ ಸ । ರಿ ರಿ ರೀ $ರಿ_1$ $ರಿ_1$ ಸ ಸ । ಪ ಸ ಸ ಸ ಸ ಸ ಸ ಪ ।
ಗು ರು ಹಿ ರಿ ಯ ರ ಪ ರಿ । ಜ ನ ರ ಸ ಖಿ ಯ ರ । ಬ ಳಿ ಗೆ ಬ ಹ ರ ನು- ।

ಪಾ ದ ಪ ಮ ಮ ರಿ ರಿ ॥
ತ್ರೇ ಜಿ ಸಿ ನ ಲಿ ಸು ವ ॥

॥ ಕಂಡಿಹೆ ನಿನಗೆಣೆ ॥—

ಪಾ ಪ ಪಾ ಪ ಪ ಮ । ಮಾ ಪ ಪ ಮಾ ಮ ಮ । ರೀ ಮ ಮ
ಅ ಣ್ಣ ತ ಮ್ಮ ನೆ ಂ- । ದೆ ಲ್ಲ ರ ಭಾ ವಿ ಸಿ । ಗ ಂ ಡೆ ನೆ

ರಿ ರಿ ಮಾ । ಪ ಪ ಪ ದ ಪಾ ।
ಬಿ ಗು ಮಾ । ನ ದೊ ಳಿ ರು ವ ।

ಪ ಪ ಪ ದಾ ಸ ಸ ರಿ । ರೀ ಮ ರಿ ಮ $ರಿ_1$ $ರಿ_1$ ಸ । ಪ ಸ ಸಾ ಸ ಸ ಪಾ ।
ಚೆ ಲು ವ ಕಂ ಡ ವ ನೆ । ನೀ ನೇ - ಈ - ಮ್ಯೆ - । ಮ ನ ವೊ ಂ ದೆಡೆಗಂ ।

ಪ ದ ಪ ಮ ಪ ಮ ರಿ ರಿ ॥
ತಾ- ದು ದೆಂ - ಬ ವ ಳ ॥

॥ ಕಂಡಿಹೆ ನಿನಗೆಣೆ ॥—

## ೫. ಏನೊರೆದೆ ಬಾನಂಚಿನಂಚಿ

ರಾಗ—ಗಾಂಧಾರದೋಲಾ : ಹರಿಕಾಂಭೋಜಿ ಜನ್ಯ] [ತಾಳ—ಖಂಡಚಾಪು

ಸ ರಿ ಮ ಪ ದ ಸ̇ಾ । ಸ̇ ನಿ ದ ಪ ಮ ಗ ಮ ಗ$_2$ ರಿ ಸ

‖ ಸಾ । ರಿ ಮ ಮಂ ‖ ಮ ಮ । ಪಾ ಮಂ ‖ ಪ ದ । ದ ಸ̇ಾ ‖
‖ ಏ । ನೊ ರೆ ದೆ ‖ ಬಾ- । ನಂ ಚಿ ‖ ನಂ- । ಚೇ - ‖

ದಾ ಸ̇ ನಿ । ನಿ ದ ದ ಪ ಪ ಮ ‖
ನ - - । ಲ್ನಾ - ಡಿ - ಯ - ‖

‖ ಪಾ । ದ ಪ ಪ ‖ ಪಾ । ಪ ದ ಸ̇ಾ ನಿ ದ ‖ ಪಾ ಮ ಗ । ರಿ ಗ ರೀ ‖
‖ ಸಂ । ಚೇ - - ‖ ನೀ । ಬ ಲು ಬ ಣ್ಣಿ ಸಿ ‖ ದ ಚೆ ಲು । ವ ವ ಳು ‖

ರಿ ಗ$_2$ ಮ ಗ$_2$ । ರಿ ಸ ರೀ ‖
ನೆ ಲ ದ ವ । ಳೋ - - ‖

‖ ರಿ ಗ ಮ ಗ । ರಿ ಸ ರೀ ಗ$_2$ ರಿ ‖ ರಿ ಗ$_2$ ಮ ಗ$_2$ । ಗ$_2$ ರಿ ರಿ ಸಾ ॰ ‖
‖ ಜ ಲ ದ ವ । ಳೋ - - - ‖ ಮು ಗಿ ಲ - । ವ - ಳೋ - ‖

ಸ̇

‖ ॰ ರಿ̇ ರಿ̇ । ರಿ̇ ರಿ̇ ರಿ̇ ‖ ॰ ಸ̇ಾ । ॰ ರಿ̇ ಗ̇ ರೀ̇ ‖ ॰ ॰ । ನೀ ॰ ನಿ ನೀ ‖
‖ ಚೆ ದು । ರಿ ರು ವೆ ‖ ನ್ನಾ । - ಸೆ ಗ ಳ - - । ಜೋ ಡಿ ಸು ‖

ದ

ದ ಪ ದಾ । ಸಾ ॰ ‖
ತಿ - ಹೆ । ಯೋ- ‖

‖ ಸ̇ ಸ̇ಾ ನಿ । ನೀ ನಿ ದಾ ಮ ‖ ಮ ಮ । ಪ ಸ̇ ನಿ ದ ಪಾ ‖
‖ ಕ ನ ಸ । ನು ಕೊ - - ‖ ಡಿ ಸು । ತಿ - ಹೆ - ಯೋ ‖

ಪ ದ ಸ̇ಾ । ನಿ ದ ಪ ಮ ಪ ದ ‖
ನುಡಿ ಮಿಂ । ಚಿ ನ ರೇ - ಖೆಯೊ ‖

ದ
||ಪಾ । ಮ ಗ ರಿ ಗ ರೀ ॥ ರಿ ಗ₂ ಮ ಗ₂ । ಗ₂ ರಿ ರೀ ॥
||ಳು । ಲೇ - ಖಿ ಸಿ ಹ ॥ ಕ - ನ - । ಸಿ - ದು ॥
ರಿ ಗ ಮ ಗ । ಮ ಗ ಮ ಗ₂ರೀ ॥
- - - - । - - - ದಿ ಟ ॥

ದ
||ಸಾ । ೯ ೯ ೯ ॥ ಸಾ । ರಿ ಮ ಮ ॥ ಮ ಮ। ಪಾ ಮ ॥ ಪ ದ । ಸಾ ೯ ॥
|| ವೆ | - - - ॥ ಏ |ನೊ ರೆ ದೆ ॥ ಬಾ - |ನಂ ಚಿ ॥ ನ ೦ - । ಚೆ ೯ ॥

||ದಾ ಸ ನಿ |ನಿ ದ ದ ಪ ಪ ಮ ॥ ಪಾ |ದ ಪ ಪ ॥
||ಸ ಖಿ - |ನು- ಡಿ - ಯು - ॥ ಸಂ |ಚೇ - - ॥

॥ ನೀ ಬಲು ಬಣ್ಣಿಸಿದ ಚೆಲುವವಳು—
ನೆಲದವಳೋ ಜಲದವಳೋ ಮುಗಿಲವಳೋ ॥

||೯ ರಿ ರಿ |ರೀ ೯ ॥ ರಿ ರಿ |ಸ ರೀ ॥ ೯ ಮ ಗಾ |ರೀ ಗ ರಿ ರಿ ಸ ॥
|| ದಿಟ |ವೋ--॥ ಸೆ ಟೆ |ಯೋ-॥ ನ ನ |ಗೇ - - - ನು ॥
ಸಾ |೯ ೯ ೯ ॥
- |. - - ॥

||ಸ ಸ |ಸ ನಿ ರಿ ಸ ಸ ನಿ ॥ ನಿ ದ ದಾ |ನಿ ಪ ಪಾ ॥
||ದಿ ಟ |ವಾ - - ದ - ॥ ರು - ಆ- | - - - ॥
೯ ೯ ರೀ |೯ ಮ ಮಾ ೯ ೯ ॥
- ಬಿ ೦ |- ಕ ದ - ॥

||ರಿ ಮ ಪ ದ |ನೀ ದ ಪ ಪಾ ॥ ೯ ರಿ ಗ₂ |ಮಾ ಪ ಮ ಗ ಮ ॥
||ಹೆ - - - | - ಣ್ಣು - - ॥ - ನ ನ |ಗೊ ಲಿ - ವ ೦ - ॥

ಗ ಮ ರೀ । ಗ$_2$ ರಿ ಗ$_2$ ಸ ರೀ ॥ ೯ ರಿ ಗ$_2$ । ಮಾ ಪ ಮಂ ಮಂ ಗ$_2$ ॥
- - ಥ । ವ - ಳಿ - - ॥ ಇ ದ । ಮ ರೆ - ವು - ॥

ಮ ಗ$_2$ ಮ ಗ$_2$ । ಗ$_2$ ರಿ ರಿ ಗ ಮ ಗ ॥
ದೆ - - - - । - - - - ॥

ಮ ಗ$_2$ ಗ ರಿ । ರಿ ಸ ಸಾ ೯ ೯ ॥ ಸಾ । ರಿ ಮ ಮ ॥ ಮ ಮ । ಪಾ ಮ ॥
- - ಜಾ - । ಣು - - - ॥ ಏ । ನೊರೆ ದೆ ॥ ಬಾ - । ನ ೦ ಚಿ ॥

ಪ ದ ಪ ದ । ದ ಸಾ ॥ ದಾ ಸ ನಿ । ನಿ ದ ದ ಪ ಪ ಮ ॥
ಸಂ - - - । ಚೇ - ॥ ಸ ಪಿ - । ನು - ಡಿ - ಯ - ॥

ರಿ ಮ ಪ ನಿ । ದ ಪಾ ॥
ಸಂ - - - । ಚೇ - ॥

ದಾ ಸಾ । ನಿ ದ ಪ ದ ಪಾ ॥ ೯ ಮ ಗ । ಮ ಗ$_2$ ಮ ಗ$_2$ ಗ$_2$ ರಿ ॥
ನ ನ್ನಂ । ಬಿ ಡು ಗ ಡೆ ಗೆ ॥ ಇ ದು । ನಿ - - - ನ್ನ - ॥

ರಿ ಗ$_2$ ರಿ ಗ$_2$ । ಮ ಗ ಮ ಮಂ ಗ ರಿ ॥ ಸಾ । ೯ ೯ ೯ ॥
ಯಂ - - - । - - - - ಹ ವ ॥ ಣು । - - - ॥

ರೀ । ಮ ಮಾ ॥ ಪಾ । ಪ ಮ ಪ ದ ಪ ದ । ದ ಸೆ । ೯ ೯ ೯ ॥
ಸಂ । ದೆ ಗ - - ॥ ಗೊ । ಳ್ಳ ದಿ - - - - - - । ರೈ - । - - - ॥

ಸ ನಿ ರಿ ಸೆ । ನಿ ದ ದ ನಿ ಪಾ ॥
ಚೆ - - - । ಲು - ವ - - ॥

ಸಾ । ಸ ನಿ ರಿ ಸ ಸ ನಿ ॥ ನಿ ದ ಪ ದ । ಪ ಮ ರೀ ॥ ೯ ೯ ರಿ ಮಂ । ಪ ನಿ ದ ಪ ॥
ಹೆ । ಣ್ಣಾ - - ವ - ॥ ಳು - ಒ - । ಲ್ಲ - ಳು ॥ - ನಿ - । ನ್ನೊ ಲ ವ - ॥

॥ ೯ ೯ । ೯ ೯ ೯ ॥ ೯ ೯ ಮ ಮಂ । ೯ ಮಂ ಮಾ ಮ ಗ ॥ ಪ ಮಂ
॥ - । - - - ॥ - - ಅ ರಿ । - ಯ ಳು ಆ - ॥ - -

ಮ ಗ । ಮ ಗ ಮಾ ರಿ ಗ ॥
ಕೆ - । - - - - ನಿ - ॥

॥ ಮಾ ಪ ಮಂ । ಮ ಗ ಪಂ ಗ ಮ $ಗ_2$ ॥ $ಗ_2$ ರಿ ರಿ ಸ । ಸಾ ೯ ॥
॥ ನ್ನಂ - - । ಥ - ನ - - - ॥ - - ಇ ರ । ವ - ॥

॥ ೯ ರಿ । ರಿ ರಿ ರಿ ॥ ರಿ । ರಿ ಸ ರಿ ॥ ೯ ೯ ಗ ಗ । ೯ ಗಾ ಮ ಗಾ ॥
॥ ಹೆ । ಸ ರಿ ಗೆ ॥ ತ- । ಕ್ಕ - - ॥ - ದ ಮ । ಯ ಂ ತಿ ಗು ॥

ರೀ । ೯ ೯ ರೀ ಗ ರಿ ॥
ಮಿ । - ಕ್ಕ ವ - ॥

॥ ರಿ ಸ । ಸಾ ೯ ॥ ೯ ೯ ॥ ಸಾ ೯ ಸ ಸಾ ॥ ಸ ನಿ ರಿ ಸ । ನಿ ದ ಮಾ ॥
॥ ನೀ - । - - ॥ - - । ಕೈ - ಬಿ ಡಂ ॥ ವ - - - । ಕ್ಕ - ವ ॥

॥ ೯ ಪ ನೀ । ದ ಪಾ ೯ ೯ ೯ ॥ ೯ ೯ । ಮಂ ಗಾ ಮಂ ಪ ಮ ॥
॥ - ಗೊಳಂ । ವೆ - - - - ॥ - - । ನೀ - ನಿ ಹಂ - ॥

॥ ಮ $ಗ_2$ ಮಂ $ಗ_2$ । $ಗ_2$ ರಿ ರಿ $ಗ_2$ ರಿ $ಗ_2$ ॥ ಮ ಗ ಮ $ಗ_2$ । $ಗ_2$ ರಿ ರಿ ಸ ಸಾ ॥
॥ ದಾ - - - । ಕೆ - ಗೆ - - - ॥ - - - - । ಒ ರೆ ವೆ - - ॥

॥ ಸಂದೆಗಗೊಳ್ಳದಿರೈ ॥—

## ೬. ಪೋ ಪೋ ಪೋ ಹಂಸ

ರಾಗ—ಕಾಫಿ] [ಆದಿತಾಳ

ಪಾ ॰ ಮ ಮಾ ॰ ಗ। ಗಾ ॰ ರಿ ಸ ಸ। ಸಾ ಸ ಪ ಪಾ। ಸ ರಿ ಮಾ
ಪೋ ॰ - ಪೋ ॰ - । ಪೋ ॰ - ಹಂಸ। ಆ ಗ - ಸ । ದ - ವ

ಮಂ ಗ ರೀ ॥
ತಂ - ಸ ॥

॰ ॰ ರೀ ॰ ಮ ಮಾ। ಪಾ ಪ ಪ। ॰ ॰ ಪ ಮಾ ಪ ಪಾ। ಮ ಪ ನಿ ಪ
ಪೋ ॰ ಸು ಖಿ। ಯಾ ಗೆ ಲೆ। - ವಾ - ನ ಸ । ಸ - ಖಿ -

ಮ ಗ ಗಾ ರೀ॥
ಯೋ- - - - ॥

ಪಾ ಪ ಸಂ। ॰ ಸಂ ಸಂ ಸಂ। ॰ ॰ ರಿಂ ಮಾಂ ಗಂ ರೀಂ। ಸಾ ನಿ ದ ಪಾ ॥
ಪೋ ಗು ಪೋ। -ಗು ಮ ನ। - - ಬ ರು ವೊ ಡೆ। ಪೇ ಳಾ- - ।

॰ ಪ ಪ ರಿಂ ಸಂ। ಸ ನಿ ನಿ ದ ದ ಪ ಪಾ। ॰ ॰ ಮ ಗ್ಯಾ ಮ ಪಾ।
- ದ ಮ ಯಂ। - ತಿ - ಗೆ - ನ - ಳ - - । - ನೆಂ ಬ ನ - - ।

॰ ಮ ಗ ಮಾ ಗ ರೀ॥
- - ತೆ ರ ವ ನು ॥

॥ಪೋ ಪೋ॥—

ಪಾ ॰ ಮಂ ಮಾ ॰ ಗ। ಗಾ ॰ ರಿ ಸ ಸ ಸಾ। ಸಾ ಸ ಪ ಪಾ।
ಪೋ ॰ ಪೆ ಪೋ ॰ ಪೆ। ಪೋ ॰ ಪೆ ನ ರ ಸ। ಆ ಹೆ - ಣ್ಣಂ।

ಸಾ ರಿ ಮ ಮ ಗ ರೀ॥
ನಿ ನ್ನ ನೆ ವ ರಿ ಸೆ॥

||ಪಾ ಪ ಸ। ೯ ಸ ಸಾ। ೯ ೯ ರಿ ಮಾ ಗ ರೀ। ಸ ಸ ನಿ ದ ಪಾ॥
||ಪೋಗಿ ಪೇ। - ಳಿ ನಿ। - ನ್ನಿ ರ ವಿ ನ -। ತೆ ರ ವ - ನು॥

||ಪಾ ರಿ ಸ। ಸ ನಿ ನಿ ದ ಪ ಪಾ। ೯ ೯ ಮ ಗ್ಯಾ ಮ ಪಾ।
||ಭಾ ಮಿನಿ। ಯೆ - ದೆ - ಯ - ನು। - ತೆ ರೆ ವೆ ನು।
೯ ಮ ಗ ಮಾ ಗ ರೀ||
ನಿ - ನ ಗೆ - ||

||ಪಾ ಪ ಮ ಮಾ ಮ ಗ। ಗ ಗ ಗ ರಿ ರಿ ಸ ಸಾ। ಸಾ ಸ ಪ ಪಾ।
||ಪೋ ಪೆ ವು ಪೋ ಪೆ ವು। ಹ ರ ಸು ತ ಅ ರ ಸೆ। ಆ ಹೆ - ಣ್ಣು।
ಸಾ ರಿ ಮ ಮ ಗ ರೀ॥
ನಿ ನ್ನ ನೆ ವ ರಿ ಸೆ॥

॥ಪೋಗಿ ಪೇಳಿ ನಿನ್ನಿರವಿನ ತೆರವನು।
।ಕಾಮಿನಿಯೆದೆಯನು ತೆರೆವೆವು ನಿನಗೆ॥

## ೭. ಸಂಜೆ ಬಿನದಕೆ ಬನ್ನಿರೇ ಸಖಿ

ರಾಗ—ನಠಭೈರವಿ] [ಚತುಶ್ರ ಏಕತಾಳ

||ಪಾ ೯ ದ ಪ ದ ಪ ದ। ನೀ ೯ ದ ಪಾ ಪ ದ। ನೀ ೯ ದ ಪಾ ಪ ದ।
||ಸ ಂ ಜೆ ಬಿ ನ ದ ಕೆ। ಬ ನ್ನಿ ರೇ ಸ ಖಿ। ಬ ನ್ನಿ ರೇ ಸ ಖಿ।
ನೀ ೯ ದ ಪಾ॥
ಬ ನ್ನಿ ರೇ॥

ಪಾ ॰ ಮ ಮ ಗ ಗ ರಿ । ರಿ ಮ ಮ ಗ ಗ ರಿ ರೀ । ॰ ॰ ಮ ಗ
ದುಂ ಡು ಮ - ಲ್ಲಿ ಗೆ । ಮುಗುಳಿನ ಚೆಂ - ಡ । - - - -

ಗಾ॰ ರಿ । ಸಾ ಸ ರಿ ಮ ಗಾ ರಿ । ಸಾ ॰ ॰ ॥
ತ ನ್ನಿ । ರೇ ಸ ಖಿ ತ - ನ್ನಿ । ರೇ - - ॥

॥ಪಾ ದ ನಿ ಸ ರಿ ಸ ಸ । ನೀ॰ ದ ಪಾ । ಪಾ ದ ನಿ ಸ ರಿ ಸ ಸ ।
॥ತೋಟ ದ ಬಯಲೊಳು । ಸೇ ರಿ ರೆ । ಕೂ ಟ ದ ಗೆ ಲ ವ ನು ।

ನೀ ॰ ದ ಪಾ ಪ ಪ ।
ತೋ ರಿ ರೆ ನ ಮ ।

॥ಪ ನಿ ದ ಪ ಮ ದ ಪ ಮ । ಗ ಮ ಗ ಮ ಪಾ । ಪ ದ ಪ
॥ಗಾ- ಟ ದಿ ಜ ಯ ವ ನು । ಕೋ- - ರಿ ರೆ । ಮು ಗಿ ವ

ಮ ಪ ಮ ಗ ರಿ । ರೀ ॰ ಗ ಸಾ ॥
ಮು - ನ್ನ ಕೆಂ - । ದಾ ವ ರೆ ॥

॥ ಸಂಜೆ ಬಿಸದಕೆ ಬನ್ನಿರೇ ಸಖಿ ಬನ್ನಿರೇ ॥

॥ಸಾ ರಿ ನಿ ಸಾ । ಸಾ ರಿ ನಿ ಸಾ । ನಿ ಸಾ ॰ ನಿ ಸಾ ॰ । ರಿ ಸಾ ॰ ॰ ॰ ।
॥ಬಂ ದೆ ವಿ ದೋ । ಬಂ ದೆ ವಿ ದೋ । ಇ ದೋ ॰ ಇ ದೋ ॰ । ಇ ದೋ ॰ - - ।

॥ಸಾ ರಿ ನಿ ಸಾ ಸ ನಿ । ಸಾ ರಿ ನಿ ಸಾ । ನಿ ಸಾ ॰ ನಿ ಸಾ ॰ ।
॥ತಂ ದೆ ವಿ ದೋ ಚೆಂ ಡ । ತಂ ದೆ ವಿ ದೋ । ಇ ದೋ ॰ ಇ ದೋ ॰ ।

ರಿ ಸಾ ॰ ॰ ॰ ॥
ಇ ದೋ ॰ - ।

| ಪ ದ ಪ ಮ ಪ ಮ ಮ ಗ । ಗ ಮ ಗ ಮ ಪಾ । ಪ ದ ಪ ಮ
| ದಂ - ಡು ಮ - ಲ್ಲಿ ಗೆ ಯ । ಚೆಂ - - ಡ ನು । ದಂ - ಡೆ ಯ

ಮ ಪ ಮ ಗ । ಗ ಮ ಗ ಮ ಪಾ ।
ಹೂ - ಗ ಳ । ದುಂ - - ಡ ನು ।

| ಪಾ ನೀ ಸಾ ರಿ ಸ । ಸಾ ನಿ ನಿ ದ ದ ಪಾ । ಪ ನಿ ದ ಪ ಮ ದ ಪ ಮ ।
| ಅಂ ಗೈ ಯೇ ಟಿ ಗೆ । ಚಂ ಗ ನೆ ನೆ ಗೆ ವ । ರೇ - ಶಿ ಮೆ ಹೊ ಲಿ ಗೆ ಯ ।

ಗ ಮ ಗ ಮ ಪಾ ।
ಚೆಂ - - ಡ ನು ।

| ಪ ನಿ ದ ಪ ಮ ದ ಪ ಮ । ಗ ಮ ಗ ಮ ಪಾ ಪ ಪ । ಪ ನಿ ದ ಪ
| ಮಿಸುನಿಯ ಕು ಸು ರಿ ಯ । ದುಂ - - ಡ ನು ದ ಮ । ಯಂ - ತಿ ಯ

ಮ ಪ ಮ ಗ । ಸಾ ನಿ ರಿ ಸಾ ॥
ಬಿ ನ ದ ಕೆ । ತಂ ದೆ ವಿ ದೋ ॥

॥ ಸಂಜೆ ಬಿನದಕೆ ಬನ್ನಿರೇ ॥

|| ಸಾ ರಿ ನಿ ಸಾ । ಸಾ ರಿ ನಿ ಸಾ । ನೀ ನಿ ದ ನೀ ನಿ ದ । ನೀ ದ ಪಾ ।
|| ಬಾ ವಿ ಮ ಲೇ । ಬಾ ಕ ಮ ಲೇ । ಬ ನ್ನಿ ರಿ ಬಾ ರೆ ಶ । ಕುಂ - ತ ಲೇ ।

| ಪಾ ನಿ ನಿ ಸಾ ರಿ ರಿ । ನೀ ಸ ಸ ನಿ ನಿ ದ ಪ । ಪ ನಿ ದ ಪ ನಿ ದ ಪ ಪ ॥
| ಆ ಟ ದ ಮೈ ಕು ಲ । ಕಾ ಟ ದಿ ಕ ದ ರ ಲಿ । ತ ಳಿ ರ ಸಿಂ - ಗ ರ ದ ।

ಗಾ ಮ ಪಾ ।
ಮುಂ ದ ಲೆ ।

ಪ ಪ ಪ ನಿ ನಿ ಸ ಸ ಸ । ರಿ ರಿ ರಿ ರಿ ರೀ ರಿ ರಿ । ರಿ ಗ ರಿ ಸ ರಿ ಸ ನಿ ನಿ ।
ಸು ಳಿ ಗುರು ಳೊಳುನರು । ಬೆ ಳ ಕ ನು ಬೀ ರು ವ । ಮಣಿಯು ನುರುಳಿ ಸ ಲಿ ।
ಪ ದ ನಿ ದ ಪಾ ॥
ಬೈ - - ತ ಲೆ ॥

॥ ಬಾ ವಿಮಲೇ . . . . ಶಕುಂತಲೇ ॥

ಪ ಸ ಸ ಸ ಸ ಸ ನಿ ನಿ । ನಿ ರಿ ಸ ನಿ ದ ದ ದ ದ । ಪ ನಿ ದ ಪ
ದ ಳ ವ ತೆ ರೆ ದ ಅ ರ । ವಿಂ - ದ ವ ಕ ರ ದೊ ಳ । ಗಾ - ಡಿ ಸಿ
ಮ ದ ಪ ಮ । ಗ ಮ ಗ ದ ಪಾ ।
ಮ್ಯೆ - ಯು ನು । ತಾ - ಕಿ ಸು ತ ।

ಪ ದ ಪ ಪ ನಿ ನಿ ನಿ ಸ । ಸ ಗ ರಿ ರಿ ಸ ನಿ ನೀ । ಪ ದ ನೀ ನಿ ನಿ ದ ದ ।
ಮುಸುರು ವ ಳಿ ಗೆ ಮ - । ಲ್ಲಳಿಗೊಳು ವೊಲುಮಾ । ವಿನ ಮಂ ಜರಿಯನು ।
ನೀ ದ ದ ಪಾ ।
ಸೋಕಿ ಸು ತ ।

ಪ ನಿ ನಿ ಸ ಸ ರಿ ರಿ ರಿ । ರಿ ಮ ಮ ಗ ಗ ರಿ ಸ ಸ । ಪಾ ನೀ ಸ ಸ ಸ ಸ।
ಮ - ಲ್ಲ ಡಿ ಯೊದೆತವ । ಮ ರು ಳಿ ಸು ವ ಸು ಗೆಯು । ಕ ನ್ನೈ ದಿಲೆ ಹೊಸ।

ರಿ ಮ ಮ ಗ ಗ ರಿ ಸ ಸ ।
ಮ - ಲ್ಲಿ ಗೆ ಯೊಸಗೆಯು ।

ಸಾ ನಿ ನೀ ದ ದ ಪ । ಪಾ ೯ ಮ ಗ ರಿ ಸ ಸ ।
ಚೆಂಡಿ ನೇ ಟ ದ ಮ । ಯಂ ತಿ ಗುಣಿ ಸಲು ।

॥ ಸಂಜೆ ಬಿನದಕೆ ಬನ್ನಿರೇ ॥

ಪ ಸ ಸ ಸ ಸ ಸ ಸ ಸ ಸ । ನಿ ರಿ ಸ ನಿ ದ ದ ದ ದ ದ । ಪ ನಿ ದ ಪ
ನ ಡೆ ವೆ ಡೆ ನೆ ಲ ದೆ ದೆ । ಜು-ಮ್ಮಂ- ದಿ ತೊ ಎ ನೆ । ನೇ - ಪು ರ

ಮ ದ ಪ ಮ । ಗ ಮ ಗ ದ ಪಾ ।
ದಿ ನಿ ದ ನಿ । ಯೇ-ಳು ತಿ ರೆ ।

ಪ ದ ಪ ಪ ನಿ ನಿ ನಿ ಸ । ಸ ಗ ರಿ ರಿ ಸ ನಿ ನಿ ನಿ । ಪ ದ ನೀ ನಿ ನಿ ದ ದ ।
ಬ ಳು ಕಿ ಬ ಳು ಕಿ ಚೆಂ- । ಡಾ-ಡು ವ ಚ ಳ ಕ ವ । ಬ ಳೆ ಯಿಂ ಚ ರ ಬ ಲು ।

ನಿ ನಿ ನಿ ದ ಪಾ ।
ಹೊ ಗ ಳು ತಿ ರೆ ।

ಪ ನಿ ನಿ ಸ ಸ ರಿ ರಿ ರಿ ರಿ । ರಿ ಮ ಗ ಗ ರಿ ರಿ ಸಾ । ಸಾ ನಿ ನಿ ಸಾ ಸ ಸ ।
ಜ - ವ್ವ ನ ದೇ - ರು ವೆ । ಯೆ ದೆ ಯ ತೇ - ರಿ ಗೆ । ಹೂ ಡಿ ರು ವಂ ಚೆ ಯು ।

ನಿ ರಿ ಸ ನಿ ದಾ ದ ದ । ಪ ನಿ ದ ಪ
ವಾ-ಘೆಯ ರೀ ತಿ ಗೆ । ಮು- ತ್ತಿ ನ

ಮ ದ ಪ ಮ । ಗ ಮ ಗ ದ ಪಾ ।
ಹಾ - ರ ವು । ತೊ ನೆ ಯು ತಿ ರೆ ।

ಪ ಸ ಸ ಸ ಸ ಸ ಸ ಸ । ನಿ ರಿ ಸ ನಿ ನಿ ದ ದಾ । ಪ ನಿ ದ ಪ
ಬೆ ಮರ್ವನಿ ವೊಗದೊಳು ಮೂ - ಡು ತಿ ರೆ - ಚಂ । ಬೆ ಳ ಕ ದ

ಮ ದ ಪ ಮ । ಗ ಮ ಗ ದ ಪಾ ।
ರೊ ಳು ತು ಳು । ಕಾ - ಡು ತಿ ರೆ ।

| ಪ ನಿ ನಿ ಸ ಸ ರಿ ರೀ । ರಿ ಮ ಮ ಗ ಗ ರಿ ಸಾ ।
| ಬಿ ಡು ಗ- ಣ್ಣರಃಬಾಂ । ದ ಳ ದೊ ಳು ನೆ ರೆ ದು ।

| ಸಾ ನಿ ನೀ ೯ ದ ದ ಪ । ಮಪಪಮ ಗರಿಸಸ ॥
| ನೋ ಡು ವಂ ಥ ದ ಮ । ಯಂ- ತಿ ಯ ಬಿನದಕೆ ॥

॥ ಸಂಜೆ ಬಿನದಕೆ ಬನ್ನಿರೀ ॥

॥ತೋಟದ ಬಯಲೊಳು ಸೇರಿರೆ ।
।ಕೂಟದ ಬಿನದವ ತೋರಿರೆ ।
।ನಮಃಗಾಟದಿ ಗೆಲವನು ಕೋರಿರೆ ।
।ಮುಗಿವಮುನ್ನ ಚೆಂದಾವರೆ ॥

|| ನೀ ಸಾ ೯ ನಿ ದಾ ॥ ದಾ ನೀ ೯ ದ ಪಾ । ಪಾ ದಾ ೯ ಪ ಮಾ ।
|| ಬ ನ್ನಿ ೯ ಸ ಖಿ । ಬ ನ್ನಿ ೯ ಸ ಖಿ । ಚೆಂ ದಾ ವ ರೆ ।

ಮಮಗಾಮಪಾ
ಬಿ ರಿ ವ ಲ್ಲಿ ಗೆ ।

| ಪಾ ದಾಪಮಾ । ಪ ಪಗಾಮಃಪಾ । ನೀ ಸಾ ೯ ನಿ ದಾ ।
| ಮಂ ದಾ ನಿ ಲ । ಸು ಳಿ ವ ಲ್ಲಿ ಗೆ । ಇ ಮ್ಮಾ ವಿ ನ ।

ದಾ ನೀ ೯ ದ ಪಾ ।
ಬಂ ಡಿ ನೊ ಳು ।

ನಿ

| ಪ ಪ ದಾ ೯ ಪ ಪಾ । ಪ ಪ ಗಾ ೯ ಮ ಪಾ । ಪ ಪ ದಾ ೯ ಪ ಪಾ ।
| ನೆ ಲ ಸಂ ಪಿ ಗೆ । ನೆ ನೆ ವ ಲ್ಲಿ ಗೆ । ನ ನೆ ಗೊಂ ಚ ಲು ।

ಪ ಪ ಗಾ ೯ ಮ ಪಾ ।
ತೊ ನೆ ವ ಲ್ಲಿ ಗೆ ॥

||ಮಾ ಪ ಮಾ ಪ ಮ ಪ । ಗ ಮ ಗ ಮ ಪಾ । ಪಾ ಪ ಮಾ ಪ ಮ ಪ ।
||ಸು ಗ್ಗಿ ಹ ಕ್ಕಿ ಕ ರೆ । ವ - - ಲ್ಲಿ ಗೆ । ದುಂ ಬಿ ಸೊ ಕ್ಕಿ ಮೊ ರೆ ।
ಗ ಮ ಗ ಮ ಪಾ ।
ವ - - ಲ್ಲಿ ಗೆ ।

|ಸಾ ಸ ರಿ ರಿ ಸ ಸ ಸ । ನೀ ದ ಪಾ । ಪ ನಿ ದ ಪ ಮ ದ ಪ ಮ ।
|ಹಿ ಗ್ಗ್ಗಿ ಹ ರ ಸಿ ಬ ರು । ವ ಲ್ಲಿ ಗೆ । ಬೇ - ಸ ರ ನ ಮ್ಮ ತೊ ರೆ ।
ಗ ಮ ಗ ಮ ಪಾ ।
ವ - - ಲ್ಲಿ ಗೆ ।

|ಸಾ ರೀ ॰ ಸ ನೀ । ನೀ ಸಾ ॰ ನಿ ದಾ । ಪ ನಿ ದ ಪ ಮ ದ ಪ ಮ ।
|ಬ ನ್ನಿ ॰ ಸ ಖಿ । ಬ ನ್ನಿ ॰ ಸ ಖಿ । ಬೇ - ಸ ರ ನ ಮ್ಮ ತೊ ರೆ ।
ಗ ಮ ಗ ಮ ಪಾ ।
ವ - - ಲ್ಲಿ ಗೆ ।

|ಪಾ ಪ ಮ ಪ ಮ ಮ ಗ । ಗ ಮ ಗ ಮ ಪಾ ॥
|ಹಿ ಗ್ಗ್ಗಿ ಹ ರ ಸಿ ಬ ರು । ವ - - ಲ್ಲಿ ಗೆ ॥

॥ ಸಂಜೆ ಜಿನದಕೆ ಬನ್ನಿರೇ ॥

## ೮. ನೋಡು ಸಖಿ ನೋಡು ನೋಡದೊ

ರಾಗ— ಖರಹರಪ್ರಿಯ] [ರೂಪಕತಾಳ

||ಪಾ ॰ ದ । ನಿ ಪಾ ॰ ॥ ಮಾ ॰ ಗ । ಮಾ ॰ ಗ ಮಾ ॥
||ನೋಡು । ಸ ಖಿ ॥ ನೋ ಡು । ನೋ ॰ ಡ ದೋ ॥
ಗಾ ॰ ರಿ । ಗಾ ॰ ರಿ ಗಾ ॥
ಬಾ ನ । ವೋ ॰ ಡಿ ಯು ॥

ರೀ ೯ ಸ । ರೀ ೯ ಸ ರೀ ॥ ರಿ ಮ ಗ ರಿ । ಸಾ ರಿ ಮ ಗ ರಿ ಸಾ ॥
ಏ ನ । ದೇ ೯ ನ ದು ॥ ಹಂ- - - । ಸ ಹಂ- - - ಸ ॥

ರಿ ಮ ಗ ರಿ । ಸಾ ೯ ೯ ॥
ಹಂ - - - । ಸ - - ॥

ದಾ ೯ ನಿ । ಸ ನಿ ಸಾ ॥ ದಾ ೯ ನಿ । ಸ ನಿ ಸ ರೀ ಸ ॥ ರಿ ಮ ಗ ರಿ । ಸಾ
ಏ ನು । ಚೆಲು ವೆ ॥ ಎಂ - ಥ । ಚೆಲು ವೆ - - ॥ ಹಂ - - । ಸ

ರಿ ಮ ಗ ರಿ ಸಾ ॥
ಹಂ - - - ಸ ॥

ರಿ ಮ ಗ ರಿ । ಸಾ ೯ ೯ ॥
ಹಂ - - - । ಸ - - ॥

ದ ನಿ ಸಾ । ನಿ ಸಾ ೯ ॥ ದಾ ೯ ನಿ । ಸ ನಿ ಸಾ ॥ ರಿ ಗ ಮ ಮ ।
ಬಿ ಳಿ ಮು । ಗಿ ಲು - ॥ ಬೆ ಳ್ಳಿ । ಮುಗಿಲು ॥ ಹ ರ ಣ ವ ।

ಗ ರಿ ಸಾ ನಿ ದ ಪಾ ॥
ಗೊಂ- - ಡಿ ಹುದೊ ॥

ಸಾ ನಿ ದ । ಸಾ ನಿ ದ ದ ದ ಪಾ ॥ ಸಾ ನಿ ದ । ಪ ಮ ಗ ಮಾ ಗ ರಿ ಸ ॥
ಸುಗ್ಗಿ ಯ । ಕ ಮ್ಮಿ ಉ ರ ರ ಳೋ ॥ ಏ ನಿ ದು । ಎ ನೆ ಮನಂಗೊಳುವ ॥

॥ನೋಡು ಸಖಿ ನೀಲದೊಳಗೆ ॥

॥ಲೀಲೆಯಿಂದಲಿ ತೇಲಿಬರುವೀ ॥

‖ ರಿ ಮಂ ಗ ರಿ । ಸಾ ರಿ ಮ ಗ ರಿ ಸಾ ‖ ರಿ ಮ ಗ ರಿ । ಸಾ ॰ ॰ ‖
‖ ಹಂ - ಸ ವ । ನು ಹಂ - ಸ ವ ನು ‖ ಹಂ - ಸ ವ । ನು - - ‖

‖ ದಾ ॰ ನಿ । ಸ ನಿ ಸಾ ‖ ದ ನಿ । ಸ ನಿ ಸ ಸ ‖ ರಿ ಗ ಮಾ ।
‖ ಇ ಂ ಗ । ಡ ಲಿ ನ ‖ ಸೊದೆ । ಗ ಡ ಲಿ ನ ‖ ಮೆ - - ।

ಗ ರಿ ಸಾ | ನಿ ದ ಪಾ ‖
ಲ್ದ ರೆ ಯ | ಸೆ ರ ಗೋ ‖

‖ ಸ ಸ ನಿ ದ । ಸಾ ನಿ ದ ದ ದ ಪಾ ‖ ಸಾ ನಿ ದ । ಪ ಮ ಗ ಪ ಮ ಗ ರಿ ಸ ‖
‖ ಶ ಚಿ ಕಿ ವಿ । ಯಿಂ ಜ ಗು ಳಿ ರು ವ ‖ ಮಂದಾ- । ರ ವೊ ಪಿ - ನಿ ದು ಎ ನೆ ‖

ನೋಡು ಸಖಿ
ನೋಡು ನೋಡದೊ
ಮೋಡಿಯಂಚಿಯ
ಮೂಡಿಬರುವ ಕನಸು ಕನಸು ಕನಸು

‖ ದಾ ॰ ನಿ । ಸ ನಿ ಸಾ ದ ನಿ ‖ ದಾ ॰ ನಿ । ಸಾ ॰ ನಿ ಸಾ ‖
‖ ಯಾ ರು । ಬಿ ಟ್ಟ ರೇ ಇ ದ ‖ ನಾ ರು । ಬಿ - ಟ್ಟ ರೇ ‖

‖ ದ ನಿ ಸ ಸ । ಸ ಸ ಸಾ ನಿ ದ ದ ಮ ‖ ದಾ ॰ ನಿ । ಸ ನಿ ಸಾ ದ ನಿ ‖
‖ ಬಾ-ನ್ನನ । ದೊಳು ಈ ಸ್ವ - ಪ್ನ ವ ‖ ನಾ ರು । ಬಿ ಟ್ಟ ರೇ ಪೇ- ‖

‖ ದಾ ॰ ನಿ । ಸ ನಿ ಸಾ ರಿ ಗ ಮಾ । ಗ ರಿ ಸಾ ನಿ ದ ಪಾ ‖
‖ ಆ ರು । ಬಿ ಟ್ಟರೇ ‖ ವಾ - ಗೀ । ಶ್ವ ರಿ ಯೋ ಸಿ ರಿ ಯೋ ‖

|| ಸಾ ನಿ ದ । ಸಾ ನಿ ದ ದ ದ ಪಾ ॥ ಸ ಸಾ ನಿ । ದ ಪ ದ ಪ ಮ ಗ ರಿ ಸ ॥
|| ಸ್ವಾ ಗ ತ । ಸ್ವಾ ಗ ತ ನಿ ನ ಗೆ ॥ ಸರೋವ । ರ ದ ಸುಕುಮಾ -ರಿಯೆ ॥

ನೋಡು ಸಖಿ
ನೋಡು ನೋಡದೊ
ಮೋಡಿಯಿಂದಲಿ
ಬಾನೊಳಾಡುವೀ ಹಂಸವನು ಹಂಸವನು ಹಂಸವನು

(ಹಿಂದಿನ ಚರಣದ "ಸೊದೆಗಡಲಿನ , . . ಏನಿದು ಎನೆ" ಎಂಬಂತೆ)

ಸರಳಿನಂತೆ
ಕೊರಲನೀಡಿ
ಬೆರಳನು ಬೀಣೆಯೊಳೆಂತೊ
ಗರಿಯನು ಗಾಳಿಯೊಳಲುಗಿಸಿ

॥ ನೋಡು ಸಖಿ ॥

## ೯. ಸಿಕ್ಕಿ ಸಿಕ್ಕಿ ಸಿಕ್ಕದಂತೆ ಹಕ್ಕಿಯೆ

ರಾಗ—ಬೇಹಾಗ್] [ಚತುರಶ್ರ ಏಕ ತಾಳ

|| ಗ ಮ ಗ ಮ ಗ ಮ ಗ ರಿ | ನೀ ॰ ರಿ ಗಾ | ಮ ಪ ಮ ಪ ಮ ಪ ರಿ ಗ |
|| ಸಿ ಕ್ಕಿ ಸಿ ಕ್ಕಿ ಸಿಕ್ಕದಂ ತ | ಹ ಕ್ಕಿ ಯೆ | ದ ಕ್ಕ ದೆ ಯೆ ಪೋಪೆ ಕೈ- |

| ರಿ ಗಾ ಮ ಗಾ || ಪ ನಿ ನಿ ನಿ ನೀ ನಿ ರಿ ನಿ ನಿ | ಪ ದ ದದ ಮ ದ ಪಾ |
| - ಮಿ ಕ್ಕಿ ಯೆ || ಪಕ್ಕ ಬ ಡಿ ದು ಕೊಕ್ಕನೋರೆ | ಮಾಡಿನಕ್ಕು ನ ಡೆ ವೆ |

| ಪ ಗ ಗ ಮ ಪ ಮ ಪ ರಿ | ಗ ಮ ಗ ಮ ಗ ರಿ ಸಾ |
| ಕ ಕ್ಕುಲ ತೆ ಗೊಳ್ಳುವೆನ್ನೊ | ಳು ಕ್ಕ ಳಿ ಕೆ ತ ರು ವೆ |

॥ ಸಿಕ್ಕಿ ಸಿಕ್ಕಿ ॥

|| ಪ ನಿ ನಿ ನಿ ನಿ ರಿ ನಿ ನಿ | ಪ ದ ಪ ದ ಪಾ | ಸ ಮ ಗ ಮ ಪ ದ ಪ ಪ |
|| ಕಕ್ಕುಲ ತೆ ಯೆನ್ನೊಳೀಕೆ | ಚಿ ಕ್ಕ - ವ ಳಿ | ಉಕ್ಕಳಿ ಕೆ ಗೊಳ್ಳುನೀನು |

| ದ ಪಾ ಮ ಗಾ |
| ತ ಕ್ಕ ನೊ ಳಿ |

॥ ಸಿಕ್ಕಿ ಸಿಕ್ಕಿ ॥

|| ನಿ ನಿ ನಿ ನಿ ನಿ ರಿ ನಿ ಪ | ಪ ದ ಪ ದ ಪಾ ಪ ಪ | ಸ ಮ ಗ ಮ ಪ ದ ಪ ಪ |
|| ತ ಕ್ಕ ವ ತಕ್ಕವೆ ನೆಂದು | ಚ ಕ್ಕ ೨-ದ ವಾ ಡುವ | ದಿ ಟ್ಟ ಹ ಕ್ಕಿ ತಕ್ಕುದನು |

| ಗ ಪಮ ಮಂ ಗಾ |
| ಗೈ ವೆ ನಿನ ಗೆ |

॥ ಸಿಕ್ಕಿ ಸಿಕ್ಕಿ ॥

|| ನಿ ನೀ ನಿ ನಿ ರಿ ನಿ ದ | ಪ ಪ ದ ನಿ ದ ದ ಪ ಪ | ಮ೨ ಮ೨ ಮ೨ ಮ೨
|| ಚ ಕ್ಕ ನೆ ಹಿಡಿ ದ ನ್ನ | ತೆಕ್ಕಿಯೊಳು ಬಿ ಗಿ ದ ರು | ಚಿ ಕ್ಕ ಗ ರಿ

ಮ೨ ಪ ಮ೨ ಪ
ನೋಯಃದಂ ತೆ

| ಗ ಪ ಮ೨ ಮ೨ ಮ ಮ ಗ ಗ | ಗ ಗಾ ಮ ರಿ ಮ ಗಾ |
| ಅ ಕ್ಕ ರೆ ಯ ತೋರಿ ದ ವ | ಮಿಕ್ಕ ವ ನಿ ನ ಗೆ |

| ನಿ ನಿ ನಿ ನಿ ನಿ ರಿ ನಿ ದ | ಪ ದಾ ನಿ ದಾ ಪ ಪ | ಮ೨ ಮ೨ ಮ೨ ಮ೨
| ಪಟ್ಟಿನೊಳು ಹಿಡಿ ದ ರಃ | ಪೆ ಟ್ಟಾ ಗ ದಂ ದ ದಿ | ಕ ಟ್ಟಿ ನ ನ್ನ

ಮ ಪ ಮ ಪ |
ಧೀ - ರ ಕೈ |

| ಗ ಪ ಮ ಮ ಗಾ ||
| ಬಿ ಟ್ಟಪೊ ರೆ ಯೆಂ ||

## ೧೦. ಕಂಡೆ ಕಮಲಮುಖಿ

ರಾಗ—ಭೀಮಪಲಾಸ್] [ಚತುರಶ್ರ ಏಕತಾಳ

| ನಿ ಪಾ ನಿ ಸ ರಿ ನಿ ಸ | ಪ ಪ ಮ ಮ ಗಾ ರಿ ಸ | ಪಾ ಪ ರೀ ಸ ಸ ಸ |
| ಕಂಡೆ ಕ ಮ ಲ ಮು ಖಿ | ಇ ನ ಸ ಮ ತೇ ಜ ನ | ದಿ ಟ್ಟ ಮುಟ್ಟ ಲ ದೆ |

| ಪಾ ನಿ ಪ ಮ ಮ ಗಾ | ರಿ ನೀ ಸ ಗ ರಿ ಸ ಸ ||
| ತ ಟ್ಟ ನೆ ತೆ ರೆ ವ | ಕಂಡೆಕ ಮಲ ಮು ಖಿ ||

| ಪಾ ಪ ಪ ಪಾ ಪ ಮ | ಪ ಮ ನಿ ಪ ಮ ಮ ಮ ಮ |
| ಕಾಂಬ ರ ಕಂ ಗ ಳ | ತು ಂ ಬಿ ನಿ - ಲ್ಲು ವ ನ |

| ಗಾ ಗ ಗ ರಿ ರಿ ಸ ನಿ | ಸ ಗ ಗ ಮ ಪಾ |
| ದುಂಡುಮೊಗ ದ ಕಡು | ಚೆಲು ವ ನ ನು |

| ಪ ನಿ ಪ ನಿ ಸ ಸ ಸ ಸ | ರಿ ಮ ಗ ರೀ ಸ ಸ ಸ | ಪಾ ರೀ ಸ ಸ ನಿ ಪ |
| ಗೆ ರೆ ಯ ಕೊರಲ ವ ನ | ನಿ ಡಿ ದು ತೋಳ ವ ನ | ಬೆಂ ಗಾ ವ ಲೂ ವ ನೆ |

| ಮಾ ನಿ ಪ ಮ ಗ ರಿ ನಿ |
| ಚೆ ಂ ಗೈ ಯ ವ ನ |

॥ ಕಂಡೆ ಕಮಲಮುಖಿ ॥

| ಪಾ ಪ ಪ ಪ ಪ ಪ ಮ | ಪ ಮ ನಿ ಪ ಮ ಮ ಮ ಮ |
| ಬಾ ನೆ ವೆ ತೆ ರೆ ದಿ ಹ | ಕ ಡ ಲ ಕ - ಣ್ಣ ವ ನ |

| ಗಾ ಗ ಗ ರಿ ೀ ಸ ನಿ | ಸ ಗ ಗ ಮ ಪಾ || ಪಾ ನಿ ಪ ನಿ ಸ ಸ ಸ |
| ನೋಟ ದಿ ನಲ್ ಕ ಳೆ | ಹೊಳೆಸು ವ ನ || ಎ ಲ್ಲ ರ ಹ ದು ಳ ಕು |

| ರೀ ಮ ಗ ರಿ ರಿ ಸ ಸ | ಪಾ ರಿ ರಿ ಸ ಸ ನಿ ಪ | ಮಾ ನಿ ಪ ಮ ಗ ರಿ ನಿ ||
| ಇ ಲ್ಲಾ - ಸ ರೆ ಯೆನೆ | ಬಿ ತ್ತ ರ ದ ವೆ ದೆ ಯ | ಎ ತ್ತ ರ ದಾ - ಳ ನು ||

॥ಕಂಡೆ ಕಮಲಮುಖಿ ॥

ಹರಳಿನ ಬಿಗುಹನು . . . . ಮೈಕಟ್ಟಿನವನು ॥೩॥
ಹುಲಿಯೊಲು ಹಿಡಿದೆನ್ನರಳಿಕಂಗಳಿಂ . . . . ನಗೆನಕ್ಕನ ॥೪॥
ತನ್ನ ಕನಸಿಗೇ ತಾಮರುಳಾಗುತ . . . . ಮೊನೆಮೀಸೆಗೆಳೆವನ ॥೫॥

(ಈ ಚರಣಗಳು ಮೇಲಿನಸದರಂತೆಯೇ ಇವೆ)

॥ ಕಂಡೆ ಕಮಲಮುಖಿ ॥

| ಪಾ ರಿ ಸಾ ಸ ನಿ ಪ | ಮಾ ನಿ ಪ ಮ ಗ ರಿ ನಿ |
|---|---|
| ತುಂಬುಕ ಣ್ಣೊಳ ರ | ಳಂ ಬ ನೆ ಸೆ ವ ನ - |

| ಪ ಪ ರಿ ರಿ ಸ ಸ ನಿ ಪ | ಮ ಮ ನಿ ಪ ಮ ಗ ರಿ ನಿ |
|---|---|
| ಎ ದೆ ಯ ಗ ಲ ದೊ ಳೀ- | ಬ ಗೆ ಯ ಹಿ ಡಿ ವ ನ - |

(ಮಿಕ್ಕವೂ ಹೀಗೆಯೇ)

## ೧೧. ಓ, ಮರಾಳ

ರಾಗ—ತೋಡಿ] [ಚತುರಶ್ರ ಏಕತಾಳ

ಗ

| ಪ ಮ ಗ ಮ | ರೀ ಸಾ | ನಿ ಸ ಗ ರಿ | ಸ ಸ ಸಾ | ರಿ ಸ ದ ನೀ ದ |
|---|---|---|---|---|
| ಓ - - ಮ | ರಾ ಳ | ನೀ - ನೀ - | ಪ ರಿ ನ | ಲ್ನುಡಿ ವ - - |

| ಸ ರಿ ಗ ಮ | ಪ ಮ ಪ ನಿ ದಾ | ಪಾ ೯ ೯ | ಗ ಮ ಗ ದ | ಪಾ ೯ ೯ | ಮಾ ಮಾ |
|---|---|---|---|---|---|
| ಪುರು ಷ - | ಅ ವ ನಾ - - | ರೆ ೯ | ಎ - ಲ್ಲಿ ಹ | ನೇ ೯ | ನಿ ನ್ನಾ |

| ಮ ಗ ರೀ | ಗ ರಿ ಸಾ | ದ ದ ಮ ಮ | ಮ ಮ ದ ಮ |
|---|---|---|---|
| ಲಿ ಪು ದೇ | ಹರು ಷ | ಎ ಲೆ ಮೋ- | ಡಿ ಯ ಬಾ - |

| ದ ದ ನಿ ಸ | ಸಾ ೯ ೯ | ರಿ ರಿ ರಿ ರಿ | ನಿ ರಿ ಗ ಮ ಗಾ | ಗ ರಿ ರೀ ಸಾ |
|---|---|---|---|---|
| ನಾ - - - | ಡಿ | ಮರುಳಿಯ | ಪೇ- - - - | ಳೆ - ನ ಗೆ |

| | | |
|---|---|---|
| ರಿ ರಿ ನಿ ರಿ ಗಾ ಮ ಗ | ಗ ರಿ ರಿ ನಿ ನಿ ರಿ ನೀ | ನಿ ದ ದ ಮ ಮ ಗ ಗಾ |
| ನಿ ನ ಗಾ - - - | ವೆ - ಡೆ - ಸಂ - - | ಗ - ಡಿ - ಸಿ - ತು |

| | |
|---|---|
| ಮಾ ದ ಮ ಮ ಗ ಗ ರಿ | ಗ ರಿ ಸಾ |
| ಆ - . ತ - ನ - | ಸ್ವ ರು ಪ |

॥ ಓ ಮರಾಳ ॥

(ಮಿಕ್ಕ ಚರಣಗಳೂ ಅಲ್ಪ ಸ್ವಲ್ಪ ವ್ಯತ್ಯಾಸಗಳೊಡನೆ ಇದರಂತೆಯೇ)

## ೧೨. ಬಂದೆ ಬಂದೆ ಬಂದೆನಿಗೊ ಬಳಗವೇ

ರಾಗ—ಬೃಂದಾವನ ಸಾರಂಗ] [ಚತುರಶ್ರ ಏಕತಾಳ

| | | |
|---|---|---|
| ನೀ ಸಾ ॰ ನಿ ಸಾ | ॰ ನಿ ಸಾ ರಿ | ಸಾ ॰ ॰ |
| ಹೋಹೋಹೊಹೋ | ಹೋ ಹೋ ಹೊ | ಹೋ |

| | | |
|---|---|---|
| ರಿ ಗ ರಿ ಗ ರಿ ಗ ರಿ ಸ | ॰ ಸ ನಿ ರಿ ಸಾ | ಪ ನಿ ಪ ನೀ ಪ |
| ಬಂದೆ ಬಂದೆ ಬಂದೆ ನಿಗೋ | - ಬ ಳ ಗ ವೆ | ಹಾ- ರಿ - - |

| |
|---|
| ಪ ನಿ ಪ ನೀ ಪ |
| ಹಾ- ರಿ - - - |

| | | |
|---|---|---|
| ಪಾ ಪ ಪ ಪ ನಿ ಪ ಪ | ನಿ ಪ ನಿ ಪ ನಿ ಪ ನೀ | ॰ ಪ ನಿ ಪ ನೀ |
| ಹೆ ಣ್ಣಿ ನ ಚಿ ಗು ರ ಕೈ | - ಗ ಳಿಂ - ಜಾ - ರಿ | - - ಜಾ- ರಿ |

| |
|---|
| ॰ ॰ ನಿ ನಿ ಸ ರಿ |
| - -ನುಡಿ ನುಡಿ |

| | | | |
|---|---|---|---|
| ಸ ನಿ ಸ ನಿ ಸ ರಿ | ॰ ॰ ರಿ ರಿ ರಿ ಗ | ರಿ ಸ ರಿ ಸ ಸ ನಿ ಸಾ | ರೀ ॰ ನಿ ನಿ |
| ದು ಕ ಣ ಸ ತೋರಿ | - - ಎದೆಗೊಲು | ಮೆಕಿಡಿಯಾ ತೂ- ರಿ | - ಬಂದೆ |

ಸಾ ಸ ನಿ ನಿ | ಸಾ ಸ ನಿ ನಿ | ಸಾ ಸಾ | ಮ ಪ ಮ ಮ ಪ ಮ ಮ ರಿ |
ಹಾ ರಿ ಬಂದೆ | ಹಾ ರಿ ಬಂದೆ | ಹಾ ರಿ | ಬಂ - ದೆ ಬ ಳ ಗ ವನು |

| ರೀ ೯ ಸ ನೀ | ೯ ೯ ನೀ ನಿ ಸ ರಿ ರಿ | ಸ ರೀ ಸ ಸಾ ನಿ ನಿ | ಸಾ ಸ ನಿ ನಿ |
| ಸಾ - ರಿ | - - ಮುಂ ದೆ ಎ - ತ್ತ | ದಾ - - ರಿ ಎತ್ತ | ದಾ ರಿ ಎ ತ್ತ |

| ಸಾ ಸಾ | ಪ ಪ ಪ ಮ ರಿ ಮ ಪಾ | ಪ ನಿ ಪ ಮ ರಿ ಮ ಪಾ |
| ದಾ ರಿ | ಎ ಲ ರೊಳು ಸ ರಿ ಕೆ | ಹಿ ಮಗಿ ರಿ ಸ ರ ಕೆ |

ಪಾ ನಿ ಪಾ ಮ ಪಾ
ಹೊ ನ್ನ ಬ ಣ್ಣ ದ

| ಮ ಮ ಮ ಮ ರಿ ಮ ಪಾ | ಸಾ ಸ ಸ ಸಾ ಸ ಸ | ನೀ ೯ ರಿ ಸಾ |
| ಕ ಮ ಲ ದ ಬ ನ ಕೆ | ವೇಲಿ ನ ನೀಲದೊ | ಳೀ ರಿ ಕೆ |

ರೀ ರಿ ರಿ ಮ ರಿ ರಿ ಸ | ನಿ ಪ ನಿ ಸ ರೀ | ರೀ ರಿ ರಿ ರಿ ಮ ರಿ ಸ |
ಗಾಳಿ ಬೀ - ಣೆ ಗ ರಿ | ಸಾ - - ರಿ ಕೆ | ಮಾನ ಸ ವ ಲ ನ ಮ್ಮ |

ನಿ ಸ ನಿ ಸ ರೀ |
ಕೋ - - ರಿ ಕೆ |

| ಸಾ ಸಾ ೯ ನಿ ಸಾ | ೯ ನಿ ಸಾ ೯ ರಿ ಸಾ | ೯ ೯ ೯ ೯ |
| ಹೊಹೋ ಹೊ ಹೋ | -ಹೊಹೋ-ಹೊಹೋ | - - - - |

| ರಿ ರಿ ರಿ ರೀ ನೀ ನಿ |
| ನಿ ನ ಗಿದೋ ನ ಮ್ಮ |

| ನಿ ಸ ರೀ ೯ | ರೀ ಮ ರಿ ರೀ ಮ ರಿ | ರೀ ಮ ರಿ ರಿ ರಿ ರಿ ರಿ ||
| ಹ ರ ಕೆ | ಆ ಗ ಲಿ ಯಾಗ ೯ | ಯಾ ಗ ಲಿ ನಿ ನ ಗೆ ಬೇ ||

| ೯ ರಿ ರಿ ಸ ಸ ನಿ ನಿ ಸ | ನಿ ಸ ರೀ ೯ | ನಿ ಸಾ ೯ ಸ ಸಾ |
| - ಗ ನ ಳ ನೊಳು ಸಂ- | ಗ ಡ ಕೆ | ಭೈಮೀ ೯ ನ ಳ |

| ನೀ ಸಾ ೯ ಸ ಸಾ | ನೀ ಸಾ ೯ ಸ ಸಾ | ರೀ ರಿ ರಿ ಮ ರಿ ಸ ನಿ |
| ಭೈ ಮೀ ೯ ನ ಳ | ಭೈ ಮೀ ೯ ನ ಳ | ಎಂಬ ಮ ನ ದ ಮಂ- |

| ಸ ಸ ರೀ ಪ ನಿ | ಪ ಪ ನಿ ಪ ನಿ ಪ ನಿ ಪ | ನಿ ಪ ನಿ ಪ ನೀ |
| ಗ ಳ ಕೆ ಸಲು | ವೆ ವಿ - ನ್ನು ಬಾ - ನಿ ನ | ತಿ ಂ - ಗಳ ಕೆ |

| ನೀ ಸಾ ೯ ನಿ ಸಾ | ೯ ನಿ ಸಾ ೯ ರಿ ಸಾ | ೯ ೯ ೯ ೯ ||
| ಓ ಹೊ ೯ ಹೊ ಹೋ | -ಹೊಹೋ -ಹೊಹೋ | - - - - ||

